# ಮಾನುಷಿ

ಸೆಪ್ಟೆಂಬರ್ 2005 ತಿಂಗಳ ಪತ್ರಿಕೆ

**ಮಾನಸ** ತಿಂಗಳ ಪತ್ರಿಕೆ ಸೆಪ್ಟಂಬರ್ 2005

ಸಂಪುಟ : 20 ಸಂಚಿಕೆ : 8



**ವಿಳಾಸ :**

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

**ಸೂಚನೆ :**

| | |
|---|---|
| ಬಿಡಿಪ್ರತಿ | 10-00 ರೂ. |
| ವಾರ್ಷಿಕ ಚಂದಾ | 100-00 ರೂ. |
| ಸಂಸ್ಥೆಗಳಿಗೆ | 150-00 ರೂ. |

## ಈ ಸಂಚಿಕೆಯಲ್ಲಿ.....



**ಮೈಸೂರು**

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
ವೆಂ.ವನಜ : 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ಇಡೀ ದೇಶ 59ನೇ ಸ್ವಾತಂತ್ರ ದಿನಾಚರಣೆಯನ್ನು ಸಂಭ್ರಮದಿಂದ ಆಚರಿಸುತ್ತಿದೆ. ಸ್ವಾತಂತ್ರದ ಪರಿಕಲ್ಪನೆಯ ಅರ್ಥಹೀನತೆಯು ನಮ್ಮ ದೇಶದ ಪ್ರಜಾ ಪ್ರಭುತ್ವ ತುಳಿದ ಹಾದಿಯನ್ನು ಅವಲೋಕಿಸಿದರೆ ಸ್ಪಷ್ಟವಾಗುತ್ತದೆ. ಇಂದು ಪ್ರಜಾಪ್ರಭುತ್ವದ ಅರ್ಥ ಕೇವಲ ಮತ ಚಲಾಯಿಸುವ ಪ್ರಕ್ರಿಯೆಗೆ ಸೀಮಿತವಾಗಿದೆ.

ಎಲ್ಲಾ ಕ್ಷೇತ್ರಗಳು ಕ್ಷಿಪ್ರಗತಿಯಲ್ಲಿ ಖಾಸಗೀಕರಣ ಗೊಳ್ಳುತ್ತಿವೆ. ಜಾಗತೀಕರಣ ಪ್ರಭಾವವನ್ನು ನಮ್ಮ ಮನೆಯ ಹೊಸ್ತಿಲಲ್ಲೇ ನೋಡಬಹುದು. ಇಂತಹ ಸಂದರ್ಭದಲ್ಲಿ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳೆರೆಡೂ ಉದ್ಯೋಗ ಸೃಷ್ಟಿ, ಉದ್ಯೋಗ ಖಾತರಿ, ಆಹಾರ ಭದ್ರತೆ, ಆರೋಗ್ಯ ಮುಂತಾದ ಮಹತ್ವವಾದ ಕ್ಷೇತ್ರಗಳಿಗೆ ಸಂಬಂಧ ಪಟ್ಟ ಹಾಗೆ ಸುಳ್ಳು ಭರವಸೆಯನ್ನು ನೀಡುತ್ತಿವೆ. ಈ ಭರವಸೆಗಳನ್ನು ಈಡೇರಿಸಲು ಸರ್ಕಾರಗಳು ಅಸ್ಥಿತ್ವದಲ್ಲಿ ಇವೆಯೇ ಎಂಬ ಮಹತ್ವವಾದ ಪ್ರಶ್ನೆ ನಾವು ಕೇಳಿಕೊಳ್ಳಬೇಕಾಗಿದೆ.

ಕೋಮುವಾದಿ ರಾಜಕಾರಣ, ಸಮಿಶ್ರ ಸರ್ಕಾರಗಳ ಗೊಂದಲ, ಪ್ರಕೃತಿ ವಿಕೋಪ, ಭ್ರಷ್ಟ ರಾಜಕಾರಿಗಳು,ಭ್ರಷ್ಟ ಆಡಳಿತವರ್ಗ ಇವುಗಳ ನಡುವೆ ಪ್ರಜಾಪ್ರಭುತ್ವದ 'ನಿಜವಾದ' ಪ್ರಜೆಯ ಧ್ವನಿ ಸಂಪೂರ್ಣವಾಗಿ ಅಡಗಿ ಹೋಗಿದೆ. ಪ್ರಗತಿ ಪರ ಚಿಂತನೆ, ಹೋರಾಟಗಳು, ಶಕ್ತಿಗಳು ಆಡಳಿತ ಮೇಲೆ ಯಾವುದೇ ಗಂಭೀರ ಪರಿಣಾಮವನ್ನು ಬೀರದೆ ತಮ್ಮ ಅಸ್ತಿತ್ವವನ್ನು ಪ್ರದರ್ಶಿಸುವ ಸಂಕೇತಗಳಾಗಿ ಉಳಿದು ಬಿಟ್ಟಿವೆ. ಅಲ್ಲಲ್ಲಿ ನಡೆಯುವ ಪ್ರಯತ್ನಗಳು ಚುದುರಿದ ಮೋಡಗಳಾಗಿವೆ.

ಸ್ವಾತಂತ್ರೋತ್ತರಲ್ಲಿ ಮಹಿಳಾ ಚಳುವಳಿಯ ಪ್ರಭಾವವನ್ನು ಗಮನಿಸಿದರೆ ಮಹತ್ತರವಾದ ಬದಲಾವಣೆಯನ್ನು ಗುರುತಿಸಬಹುದು. ಕಾನೂನಿನ ಸಮರದಲ್ಲಿ ನಿರೀಕ್ಷೆಗೂ ಮೀರಿ ಬದಲಾವಣೆಗಳು ಉಂಟಾಗಿವೆ. ವರದಕ್ಷಿಣೆ ನಿಷೇಧ ಕಾನೂನು, ಅತ್ಯಾಚಾರ, ದುಡಿಯುವ ಸ್ಥಳದಲ್ಲಿ ಲೈಂಗಿಕ ಶೋಷಣೆ, ಕೌಟುಂಬಿಕ ಹಿಂಸೆ, ಮುಂತಾದವುಗಳಿಗೆ ಸಂಬಂಧ ಪಟ್ಟ ಹಾಗೆ ಮಹಿಳೆಯರ ಹಿತರಕ್ಷಣೆಗಾಗಿ ಕಾನೂನುಗಳು ರೂಪಿತವಾಗಿರುವುದು ಸ್ವಾಗತಾರ್ಹ.

ಆದರೆ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆ, ದೌರ್ಜನ್ಯ ತೀವ್ರಗತಿಯಲ್ಲಿ ಹೆಚ್ಚುತ್ತಾ ಹೋಗುತ್ತಿದೆ. ಜನಸಂಖ್ಯೆಯ ಅನುಪಾತದಲ್ಲಿ ಎಲ್ಲಾ ರಾಜ್ಯಗಳಲ್ಲಿ ಮಹಿಳೆಯರ ಸಂಖ್ಯೆ ಕಡಿಮೆಯಾಗುತ್ತಿರುವುದು ಆತಂಕದ ಸಂಗತಿ. ಹೆಣ್ಣು ಭ್ರೂಣಹತ್ಯೆಯನ್ನು ತಡೆಯಲು ಕಾನೂನನ್ನು ತಂದರೂ ಆಡಳಿತ ಯಂತ್ರದಲ್ಲಿನ ಭ್ರಷ್ಟತೆಯಿಂದಾಗಿ ಇದು ಅವ್ಯಾಹತವಾಗಿ ನಡೆಯುತ್ತಲೆ ಬಂದಿದೆ.

ಉದ್ಯೋಗ ಸೃಷ್ಟಿ ಹಾಗೂ ಖಾತರಿ ಇದು ಕೇವಲ ಪುರುಷ ಕಲ್ಪನೆಯ ಯೋಜನೆಗಳು. ಯಾವುದೇ ಯೋಜನೆಗಳು ಅಂತಿಮವಾಗಿ ತಲುಪಬೇಕಾಗಿರುವುದು ಸ್ತ್ರೀಯರಿಗೆ. ಖಾಸಗೀಕರಣ ಹಾಗೂ ಜಾಗತೀಕರಣದ ದೂಳೀಪಟದಲ್ಲಿ ಸ್ತ್ರೀಯರು ಗ್ರಾಮೀಣ ಉದ್ಯೋಗವನ್ನು ಕಳೆದುಕೊಂಡು ಬೀದಿಗೆ ಬಿದ್ದಿರುವುದು ಕಣ್ಣಿಗೆ ರಾಚುವ ಸತ್ಯ. ಕಣ್ಣೊರೆಸುವ ಕೆಲವು ಉದ್ಯೋಗ ಸೃಷ್ಟಿ ಯೋಜನೆಗಳು ಮಧ್ಯವರ್ತಿಗಳ ಹಾವಳಿ, ನೌಕರರ ಭ್ರಷ್ಟತೆಯಿಂದಾಗಿ ತಲುಪಬೇಕಾದ ಜನರನ್ನು ತಲುಪುವುದೇ ಇಲ್ಲ. ಇನ್ನು ಮಹಿಳೆಯರ ಪಾಲು ಕೇಳುವುದೆಲ್ಲಿ ?

ಉದ್ಯೋಗ, ಆಹಾರ, ನೀರು ಇವು ಮಹಿಳೆಯರ ಬದುಕಿಗೆ ನೇರವಾಗಿ ಸಂಭಂದಿಸಿದವು. ಬಡ ಮಹಿಳೆಯರು ರೇಶನ್ ಅಂಗಡಿಯಲ್ಲಿ ಸಿಗುವ ಕಳಪೆ ಆಹಾರ ಪದಾರ್ಥಗಳಿಗಾಗಿ ಕೂಲಿ ನಾಲಿ ಬಿಟ್ಟು ದಿನಗಟ್ಟಲೇ ಕಾರ್ಯದರ್ಶಿಗಾಗಿ ಕಾಯುತ್ತಿರುವ ಚಿತ್ರಗಳು ಗ್ರಾಮಾಂತರ ಪ್ರದೇಶದಲ್ಲಿ ಸರ್ವೇಸಾಮಾನ. ಇಲ್ಲಿಯ ಆಹಾರ ಪದಾರ್ಥಗಳು ಹಿಂಬಾಗಿಲಿನಿಂದ ಖಾಸಗೀ ಮಾರಾಟಗಾರರ ದಾಸ್ತಾನು

ಮಳಿಗೆಯನ್ನು ಸೇರುತ್ತದೆ. ಅಭಿವೃದ್ಧಿಯ ವ್ಯಾಖ್ಯಾನವನ್ನು ಬದಲಾಗುತ್ತಿರುವ ರಾಜಕೀಯ ಆರ್ಥಿಕ ಹಿನ್ನಲೆಯಲ್ಲಿ ವಿಶ್ಲೇಷಿಸ ಬೇಕಾಗಿದೆ.

ಕರ್ನಾಟಕ ಸರ್ಕಾರದ ಆಶ್ರಯದಲ್ಲಿ ರಚನೆಯಾದ ಸ್ತ್ರೀ ಶಕ್ತಿ ಯೋಜನೆಯಿಂದಾಗಿ ಸ್ತ್ರೀಯರು ಆರ್ಥಿಕವಾಗಿ ಮುಖ್ಯವಾಹಿನಿಗೆ ಪ್ರವೇಶವಾಗಿರುವುದು ಒಂದು ಅದ್ಭುತ ಸಂಗತಿಯಾಗಿರುವುದು ನಿಜ. ಇದರಿಂದಾಗಿ ಕುಟುಂಬದಲ್ಲಿ ಸ್ತ್ರೀಯರ ಸ್ಥಾನ ಮಾನದಲ್ಲಿ ಗಮನಾರ್ಹವಾದ ಬದಲಾವಣೆಯಾಗಿದೆ. ಆದರೆ ಈ ಯೋಜನೆಯ ಹಿಂದಿರುವ ಸ್ತ್ರೀಯರ ಆರ್ಥಿಕ ಪ್ರಯತ್ನ ಜಾಗತೀಕರಣದ ಬಿರುಗಾಳಿಯ ಎದುರು ನಿಲ್ಲಲು ಸಾಧ್ಯವೆ ? ಸರ್ಕಾರಿ ಕೃಪಾಪೋಷಿತ ಸಂಸ್ಥೆಗಳು ಎಷ್ಟರ ಮಟ್ಟಿಗೆ ಸ್ವಾಯತ್ತತೆಯನ್ನು ಉಳಿಸಿಕೊಳ್ಳ ಬಲ್ಲವು ? ಕಳೆದ ಚುನಾವಣೆಯಲ್ಲಿ ರಾಜಕಾರಣಿಗಳು ಸ್ತ್ರೀ ಶಕ್ತಿ ಗುಂಪುಗಳ ಮೇಲೆ ಹಣದ ಪ್ರಭಾವ ಬೀರಿ ಮತಗಳಿಸಿರುವುದು ಏನನ್ನು ಪ್ರತಿಬಿಂಬಿಸುತ್ತದೆ ?

ಇದು ರಾಜಕೀಯದಲ್ಲಿ ಮಹಿಳೆಯರಿಗಿರುವ ರಾಜಕೀಯ ಪರಿಜ್ಞಾನದ ಕೊರತೆಯನ್ನು ಎತ್ತಿ ತೋರಿಸುತ್ತದೆ. ಪ್ರಸ್ತುತ ರಾಜಕೀಯ ವಾತಾವರಣ ಹಾಗೂ ಭ್ರಷ್ಟ ವ್ಯವಸ್ಥೆಯ ಬಗ್ಗೆ ಮಹಿಳೆಯರು ವಿಭಿನ್ನ ದೃಷ್ಟಿ ಕೋನವನ್ನು ಬೆಳಸಿಕೊಳ್ಳಬೇಕಾಗಿದೆ. ಈ ಹಿನ್ನಲೆಯಲ್ಲಿ ಮಹಿಳಾ ಚಳುವಳಿಯ ಪಾತ್ರ ಬಹುಮುಖ್ಯವಾಗುತ್ತವೆ. ನಾಲ್ಕು ಗೋಡೆಯಿಂದೀಚೆ ಹೊರ ಬರುವುದರಲ್ಲಿ ಚಳುವಳಿಯ ಪ್ರಭಾವವಿರುವ ಹಾಗೆ, ಅವರ ರಾಜಕೀಯ ದೃಷ್ಟಿಕೋನವೇನು ? ಎಂತಹ ಪ್ರತಿನಿಧಿಗಳನ್ನು ಆಯ್ಕೆ ಮಾಡಿಕೊಳ್ಳಬೇಕು ? ಯಾವ ರಾಜಕೀಯ ಪಕ್ಷ ಆಡಳಿತದಲ್ಲಿರಬೇಕು. ರಾಜಕೀಯ ಪಕ್ಷದ ಪ್ರಣಾಳಿಕೆಗಳೇನು ಎಂಬುದರ ಬಗ್ಗೆ ಸ್ಪಷ್ಟವಾದ ಅರಿವಿರಬೇಕು ? ಹೀಗಾಗದೇ ಹೋದ ಪಕ್ಷದಲ್ಲಿ ಮಹಿಳಾ ಚಳುವಳಿಯಿಂದ ಅನುಕೂಲ ಪಡೆದ ಮಹಿಳೆಯರು ಪ್ರತಿಗಾಮಿ ಶಕ್ತಿಗಳಾಗಿ ಸಂಘಟಿತರಾಗುತ್ತಾರೆ. ಇತರೇ ಶಕ್ತಿಗಳು ಅವರನ್ನು ಹೈಜಾಕ್ ಮಾಡುತ್ತವೆ. ಅವರೂ ಭ್ರಷ್ಟ ವ್ಯವಸ್ಥೆಯ ಒಂದು ಭಾಗವಾಗುತ್ತಾರೆ.

ಈ ಅಪಾಯದ ಸೂಚನೆಯನ್ನು ಮಹಿಳಾ ಸಂಘಟನೆಗಳು ಗುರುತಿಸಿ ಯೋಜಿತ ಪ್ರಯತ್ನವನ್ನು ಮಾಡಬೇಕಾಗಿದೆ.

## ಹೇಳಿರೀಗ

ಓ ವಿಜ್ಞಾನಿಗಳೆ
ಓ ಆಳುವವರೆ
ಮದ್ದುಗುಂಡುಗಳ
ಅಣುಬಾಂಬುಗಳ
ಮಾಡುವ ಮೊದಲೇ
ಓಲೆಯನೋದಿ.
ಮತ್ತೆಬಂದು
ಹೇಳಿರೀಗ

ರಾಷ್ಟ್ರದ ಗಡಿಗಳೆಲ್ಲೆಂದು ?
ಅಳೆಯಬಲ್ಲಿರಾ
ಪ್ರೀತಿ - ಜ್ಞಾನಗಳ
ಗಡಿಗಳೆಲ್ಲೆಂದು ?
ಹೇಳಿರೀಗ
ಯಾವುದರ ಗಡಿ
ಎಲ್ಲೆಂದು

- ಅಮೃತಾ ಪ್ರೀತಮ್
ಕನ್ನಡಕ್ಕೆ - ವನಜ ವೆಂ.

# ಪಟ್ಟಾಂಭಿಯ 'ಮಾನುಷಿ' ಸಂಘಟನೆಯ ಬಗ್ಗೆ

- ಸಾರಾ ಜೋಸೆಫ್

ಇವರು ಸ್ತ್ರೀವಾದಿ ಕಾರ್ಯಕರ್ತೆ ಹಾಗೂ ಲೇಖಕಿ. ಮಲೆಯಾಳಂನಲ್ಲಿ ಈಕೆ ಪ್ರಮುಖ ಬರಹಗಾರ್ತಿ ಎಂದು ಪರಿಗಣಿಸಲ್ಪಟ್ಟಿದ್ದಾರೆ. ಆಕೆಯ ಬರಹ ಹಾಗೂ ರಾಜಕೀಯ ಅಭಿಪ್ರಾಯಗಳಿಂದಾಗಿ ಈಕೆ ಪ್ರಭಾವೀಯುತ ಲೇಖಕಿಯಾಗಿದ್ದಾರೆ. ಮಲೆಯಾಳಂನ ಸರ್ಕಾರಿ ಕಾಲೇಜುಗಳಲ್ಲಿ ದೀರ್ಘ ಕಾಲ ಪ್ರೊಫೆಸರ್ ಆಗಿ ಕೆಲಸ ಮಾಡಿದ ಇವರು 20ನೆಯ ಶತಮಾನದಲ್ಲಿ ಸ್ತ್ರೀವಾದಿ ಚಳುವಳಿ ಹುಟ್ಟು ಹಾಕುವಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ. ಹೆಣ್ಣಿನ ಮೇಲೆ ನಡೆಯುವ ಸೂಕ್ಷ್ಮಾತಿಸೂಕ್ಷ್ಮ ಶೋಷಣೆಯ ಸ್ತರವನ್ನು ಗುರುತಿಸುವ ಇವರು - ಹೋರಾಟದ ಮುಂಚೂಣಿಯಲ್ಲಿಯೂ ಇದ್ದಾರೆ. ಲೇಖಕಿಯಾಗಿ ಆಕೆ ಬರೆಯಲು ಪ್ರಾರಂಭಿಸಿದ್ದು ಪದ್ಯಗಳಿಂದ. ನಂತರ ಸಣ್ಣ ಕತೆ ಬರೆಯಲು ಪ್ರಾರಂಭಿಸಿದರು. ಆಕೆಯ ಸಣ್ಣ ಕಥಾಸಂಕಲನ 'ಪಾಪ ಥಾರ' ಮಲೆಯಾಳಿ ಸ್ತ್ರೀವಾದಿ ಬರಹಗಳ ಚರಿತ್ರೆಯಲ್ಲಿ ಒಂದು ಮೈಲಿಗಲ್ಲೆಂದು ಪರಿಗಣಿಸಲ್ಪಟ್ಟಿದೆ. ದೈನಂದಿನ ಘಟನೆಗಳಿಗೆ ಆಕೆ ಕಥೆಗಳಲ್ಲಿ ಅವರದೇ ಆದ ಸೃಜನಾತ್ಮಕ ತಿರುವುಗಳನ್ನು ನೀಡುವ ರೀತಿ ಆಶ್ಚರ್ಯ ಹುಟ್ಟಿಸುತ್ತದೆ. ಅವರ 'ರಾಮಾಯಣ ಕಥಕ್ಕಲ್' ರಾಮಾಯಣವನ್ನು ಬೇರೆ ನೆಲೆಯಲ್ಲಿ ಗ್ರಹಿಸುವುದಾಗಿದ್ದು, ಪಾತ್ರ ಹಾಗೂ ಘಟನೆಗಳನ್ನು ಭಿನ್ನ ರೀತಿಯಲ್ಲಿ ಅರ್ಥೈಸುತ್ತದೆ. 'ರಾಮಾಯಣ ಕಥಕ್ಕಲ್' ಲೇಖಕಿಗೆ ಟೀಕಾತ್ಮಕ ಪ್ರಶಂಸೆಯನ್ನು ತಂದು ಕೊಟ್ಟಿದೆ. ಹೆಂಗಸರಿಗೇ ವಿಶಿಷ್ಟವಾದ ಭಾಷೆ, ಪೊಯಟಿಕ್ಸ್ ಲಯಗಳನ್ನು ಹಿಡಿಯುವುದೇ ತಮ್ಮ ಉದ್ದೇಶವಾಗಿದೆ ಎಂದು ಲೇಖಕಿ ನುಡಿಯುತ್ತಾರೆ. ಅವರ ಕಾದಂಬರಿ 'ಅಲಾಹಯುದೆ ಪೆಣ್ ಮೊಕ್ಕಳ್'. ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದುಕೊಂಡಿದೆ. ಇವರು ಭಾಗಿಯಾದ ಪಟ್ಟಾಂಭಿಯ 'ಮಾನುಷಿ' ಸಂಘಟನೆಯ ಬಗ್ಗೆಗಿನ ವಿವರಗಳನ್ನು ಲೇಖನದ ಈಭಾಗದಲ್ಲಿ ನೀಡಲಾಗಿದೆ. ಮುಂದಿನ ಭಾಗದಲ್ಲಿ ಇವರ ಕಾದಂಬರಿ, ಕತೆಗಳ ಬಗ್ಗೆ ವಿವರಗಳನ್ನು ನೀಡಲಾಗುತ್ತದೆ.

ಸಂ. ಮಂ

ಮಲೆಯಾಳಂ ಇಬ್ಬರು ಲೇಖಕಿಯರಾದ ಮಾದವಿ ಕುಟ್ಟಿ ಹಾಗೂ ಸಾರಾ ಜೋಸೆಫ್ ಹದಿನೈದು ವರ್ಷಗಳ ಹಿಂದೆಯೇ ಮದುವೆಯಾದವರು. ಸಾರಾ ಮದುವೆಯಾದಾಗ ಮದುವೆ ಎಂದರೇನೆಂಬುದೇ ಅವರಿಗೆ ಅರ್ಥವಾಗಿರಲಿಲ್ಲ. ಆಗ ಆಕೆ ಶಾಲಾ ವಿದ್ಯಾರ್ಥಿನಿಯಾಗಿದ್ದರು. ಮದುವೆಯಾಗುವುದೆಂದರೆ ನಿಕಟ ಪರಿಚಯವಿರದ ವ್ಯಕ್ತಿಗೆ ಅಡಿಯಾಳಾಗಿರುವುದೆಂದು ಸಾರಾರವರಿಗೆ ಅನ್ನಿಸಿತ್ತು. ಸಂಪ್ರದಾಯಸ್ಥ ಕ್ರಿಶ್ಚಿಯನ್‌ರಾಗಿದ್ದರಿಂದ ಈ ಚಿಕ್ಕ ಹುಡುಗಿಗೆ ಅವರದೇ ಆದ ಅಭಿವ್ಯಕ್ತಿಯ ಸ್ವಾತಂತ್ರ್ಯ ಇರಲಿಲ್ಲ. ಆದರೂ ಮದುವೆಯ ನಂತರವೂ ತವರಿನಲ್ಲಿಯೇ ಉಳಿದು ಶಾಲೆಯ ವಿದ್ಯಾಭ್ಯಾಸವನ್ನು ಇವರು ಮುಗಿಸಿದರು. ಕಾಲೇಜಿಗೆ ಹೋಗುವುದು ಸಾಧ್ಯವಾಗದಿದ್ದಾಗ ಟೀಚರ್ಸ್ ಟ್ರೈನಿಂಗ್ ಕೋರ್ಸ್ ಮುಗಿಸಿದರು.

9ನೆಯ ತರಗತಿಯಲ್ಲಿರುವಾಗ ಇವರು ಪದ್ಯ ಬರೆಯಲು ಪ್ರಾರಂಭಿಸಿದರು. ಆ ಸಮಯದಲ್ಲಿ ಇವರ ಒಂದು ಪದ್ಯ ಮಾತೃಭೂಮಿ ವಾರಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಇನ್ನೂ ಅನೇಕ ಪತ್ರಿಕೆಗಳಲ್ಲಿ ಇವರ ಪದ್ಯಗಳು ಪ್ರಕಟಗೊಂಡಿದ್ದವು. ಕವಿ ಸಮ್ಮೇಳನದಲ್ಲಿ ಸಾರಾ ಪದ್ಯಗಳನ್ನು ಓದುತ್ತಿದ್ದರು. ಆಗೆಲ್ಲ ಹಲವಾರು ಕವಿಗಳು ಸಣ್ಣ ಕಥೆ ಬರೆಯುವುದಕ್ಕಿಂತ ಕವಿತೆ ಬರೆಯುವುದೇ ಒಳ್ಳೆಯದೆಂದು ಆಕೆಗೆ ಸಲಹೆ ಇತ್ತಿದ್ದರು. ಆದಾಗ್ಯೂ ಸಹ ನಂತರದಲ್ಲಿ ಸಾರಾ ಪದ್ಯಗಳಿಗಿಂತ ಸಣ್ಣ ಕತೆಗಳನ್ನು ಬರೆದುದೇ ಹೆಚ್ಚು. ಸಣ್ಣ ಕಥೆಯ 'ಫಾರಂ' ಅಭಿವ್ಯಕ್ತಿಗೆ ಉತ್ತಮ ಮಾಧ್ಯಮ ಎಂದು ಲೇಖಕಿಗೆ ಅನ್ನಿಸಿತ್ತು.

ಬಾಲ್ಯದಲ್ಲಿ ಏಕಾಂಗಿಯಾಗಿರುವುದನ್ನು ಲೇಖಕಿ ಹೆಚ್ಚು ಬಯಸುತ್ತಿದ್ದರು. ಮನೆಯ ಎದುರಿನ ದೊಡ್ಡ ಮೈದಾನ ಇವರ ಪ್ರಪಂಚವಾಗಿತ್ತು. ಈಕೆಯ ತಂದೆ ಉತ್ತಮ ಓದುಗರಾಗಿದ್ದರು. ಇವರು ರಷ್ಯಾದೇಶದ ಕಾದಂಬರಿಗಳನ್ನು ಓದಲು ಲೇಖಕಿಗೆ ಕೊಡುತ್ತಿದ್ದರು. ಮಾತೃಭೂಮಿ ವಾರಪತ್ರಿಕೆ ಹಾಗೂ ದಿನ ಪತ್ರಿಕೆಗಳನ್ನು ಈಕೆ ಯಾವಾಗಲೂ ಓದುತ್ತಿದ್ದರು. ಸಾರಾ ರವರ ತಂದೆ ಮಾರ್ಕ್ಸ್‌ವಾದಿಯಾಗಿದ್ದರು. ಈಕೆಯ ಅಂಕಲ್ ಕಾಂಗ್ರೆಸ್ ಪಕ್ಷದ ಸದಸ್ಯರಾಗಿದ್ದರು. ಇವರಿಬ್ಬರು ರಾಜಕೀಯದ

ಬಗ್ಗೆ ಮನೆಯಲ್ಲಿ ಆಗಾಗ್ಗೆ ಚರ್ಚಿಸುತ್ತಿದ್ದರು. ಈ ಚರ್ಚೆಗಳು ಸಾರಾ ಹಾಗೂ ಮನೆಯ ಇತರ ಮಕ್ಕಳಲ್ಲಿ ಒಂದು ರಾಜಕೀಯ ಪ್ರಜ್ಞೆಯನ್ನು ಹುಟ್ಟುಹಾಕಿದ್ದವು. ಈ ರಾಜಕೀಯ ಪ್ರಜ್ಞೆಯೇ ಸಾರಾರವರ ಬರವಣಿಗೆಯನ್ನು, ಅವರ ದೃಷ್ಟಿಕೋನವನ್ನು ರೂಪಿಸುವಲ್ಲಿ ಸಹಾಯಕವಾಗಿತ್ತು.

ಸ್ತ್ರೀ ಶೋಷಣೆಯ ವಿರುದ್ಧ, ಪಿತೃಪ್ರಾಧಾನ್ಯತೆಯ ವಿರುದ್ಧ ಹೋರಾಡಲು ಸಾರಾ ಜೋಸೆಫ್ 'ಮಾನುಷಿ' ಎಂಬ ಸಂಘಟನೆಯೊಂದನ್ನು ಹುಟ್ಟು ಹಾಕಿದರು. 'ಮನುಷ್ಯ'ನ ತರಹ 'ಮನುಷ್ಯಳು' ಎಂಬ ಜೀವಿ ಕೂಡಾ ಇದೆ ಎಂಬುದನ್ನು ನೆನಪಿಸುವ ಹೆಸರು 'ಮಾನುಷಿ' ಆಗಿತ್ತು. ಈ ಸಂಘಟನೆ ಪ್ರಾರಂಭವಾದದ್ದು ವರದಕ್ಷಿಣೆ ಕೊಲೆಗಳನ್ನು, ಅವುಗಳ ಹಿನ್ನಲೆಯನ್ನು ಚರ್ಚಿಸುವುದಕ್ಕಾಗಿ. 80ರ ದಶಕದಲ್ಲಿ 'ಮಾನುಷಿ' ಪ್ರಾರಂಭವಾದಾಗ ಸ್ತ್ರೀ ವಿಮೋಚನೆಯ ತಾತ್ವಿಕ ನೋಟದಿಂದ ಇದು ಪ್ರಾರಂಭವಾಗಿರಲಿಲ್ಲ. ಪಟ್ಟಾಂಬಿ ಕಾಲೇಜಿನ ಹುಡುಗಿಯರು ವರದಕ್ಷಿಣೆ ಸಾವಿನ ವಿಚಾರಗಳನ್ನು ಚರ್ಚಿಸಲು ಸಿದ್ಧರಿದ್ದರು. ಆ ಕಾಲೇಜಿನಲ್ಲಿ ಪ್ರಗತಿಪರ ಆಲೋಚನೆಗಳಿಗೆ ಪೂರಕವಾದ ವಾತಾವರಣವಿತ್ತು. ಈ ಕಾಲೇಜ್ ಉತ್ತಮವಾದ ಸಾಂಸ್ಕೃತಿಕ ವಾತಾವರಣವನ್ನು ಹೊಂದಿತ್ತು. 'ಪ್ರಸಕ್ತಿ' ಹಾಗೂ 'ಮನುಷ್ಯನ್' ಎನ್ನುವ ಎರೆಡು ಪತ್ರಿಕೆಗಳನ್ನು ಈ ಕಾಲೇಜಿನಿಂದ ಹೊರ ತರಲಾಗಿತ್ತು. ಕೆ.ಜಿ. ಶಂಕರ್ ಪಿಲ್ಲಾಯಿ ಹಾಗೂ ಪಿ.ಎನ್.ದಾಸ್ ಇವರು ಈ ಕಾಲೇಜಿನಲ್ಲಿ ಇದ್ದರು. 1978 ರಲ್ಲಿ ಸಾರಾ ಜೋಸೆಫ್ ಈ ಕಾಲೇಜಿಗೆ ಸೇರಿಕೊಂಡರು. ಆ ಸಂದರ್ಭದಲ್ಲಿ ಪಟ್ಟಾಂಬಿ ಕಾಲೇಜಿನಲ್ಲಿ ಯಾವುದೇ ಫ್ಯಾಷನ್ ಪೆರೇಡಗಳೂ ನಡೆಯುತ್ತಿರಲಿಲ್ಲ. ಇಂದಿಗೂ ಕೂಡಾ ಪಟ್ಟಾಂಬಿ ಕಾಲೇಜ್ ಒಳ್ಳೆಯ ಸಾಂಸ್ಕೃತಿಕ ಸಂಪ್ರದಾಯವನ್ನೇ ಉಳಿಸಿಕೊಂಡಿದೆ. ಕೆಲವು ವಿದ್ಯಾರ್ಥಿಗಳು ಹಾಗೂ ಸಾರಾ ವಾರದ ಸಭೆಗಳನ್ನು ಗೊತ್ತು ಪಡಿಸಿಕೊಂಡು ವರದಕ್ಷಿಣೆ ಯಂತಹ ಸಮಸ್ಯೆಗಳನ್ನು ಚರ್ಚಿಸಲು ಪ್ರಾರಂಭಿಸಿದರು. ಹೀಗೆ 'ಮಾನುಷಿ' ಪ್ರಾರಂಭವಾಗಿತ್ತು . ಹಾಗೆಯೇ ಕ್ರಮೇಣವಾಗಿ ಇತರ ಶಿಕ್ಷಕಿಯರೂ ಸೇರಿಕೊಂಡ ಮೇಲೆ ಈ ಸಭೆಗಳು ಸಂಘಟನೆಯ ರೂಪ ಪಡೆದುಕೊಳ್ಳ ತೊಡಗಿತು. ಆ ಸಂದರ್ಭದಲ್ಲಿ ಯಾವುದೇ ರೀತಿಯ 'ರಾಜಕೀಯ'ದ ಪ್ರವೇಶ ಇರಲಿಲ್ಲ.

ಇದೇ ಸಂದರ್ಭದಲ್ಲಿ ಪಟ್ಟಾಂಬಿಯಲ್ಲಿ ಕೆಮಿಸ್ಟ್ರಿ ಉಪನ್ಯಾಸಕ ಹಾಗೂ ಸಂಸ್ಕೃತದ ವಿದ್ಯಾರ್ಥಿನಿಯೊಬ್ಬರ ಮಧ್ಯೆ ಸಂಬಂಧವಿತ್ತು. ಇದನ್ನು ವಿದ್ಯಾರ್ಥಿ / ವಿದ್ಯಾರ್ಥಿನಿಯರು ವಿರೋಧಿಸಿದರು. ಆತ ಆ ಹುಡುಗಿಯನ್ನು ಬಳಸಿಕೊಳ್ಳುತ್ತಿದ್ದಾನೆಂದೂ ಹಾಗೂ ಅವನು ಸಾರ್ವಜನಿಕವಾಗಿ ಕ್ಷಮೆ ಕೋರಬೇಕೆಂದೂ ಗಲಾಟೆ ಪ್ರಾರಂಭವಾಯಿತು. ಆದರೆ ಸಾರ್ವಜನಿಕ ಕ್ಷಮೆಯ ಪ್ರಶ್ನೆಯಲ್ಲಿ ಹುಡುಗಿಯ ಜೀವನದ ಪ್ರಶ್ನೆ ಇದ್ದುದರಿಂದ ಸಾರಾ ಜೋಸೆಫ್ ಹುಡುಗಿಯ ಬಗ್ಗೆ ಯೋಚಿಸಬೇಕಾಗುತ್ತದೆ ಎಂದರು. ಆದರೆ ಆ ಉಪನ್ಯಾಸಕ ಕ್ಷಮೆ ಕೇಳಲು ಸಿದ್ಧನಾದ. ಅಂದರೆ ನಿಜವಾಗಿ ಅವನಿಗೆ ಆ ಹುಡುಗಿಯ ಬಗ್ಗೆ ಆಸಕ್ತಿ ಇರಲಿಲ್ಲ. ಅವಳನ್ನು ಬಳಸಿಕೊಳ್ಳುತ್ತಿದ್ದ ಅಷ್ಟೇ. ಆ ಹುಡುಗಿ ಆತ್ಮಹತ್ಯೆ ಮಾಡಿಕೊಂಡಳು.

ಈ ಸಾವಿನಿಂದಾಗಿ ಹುಡುಗಿಯರು ಒಗ್ಗಟ್ಟಾದರು. ಕಾಲೇಜಿನ ವ್ಯವಸ್ಥಾಪರು - ಯಾವುದೇ ಉಪನ್ಯಾಸಕರು ಹುಡುಗಿಯರನ್ನು ಬಳಸಿಕೊಳ್ಳಲು ಬಿಡಬಾರದು ಎಂಬ ಬೇಡಿಕೆಯೊಂದನ್ನು ಹುಡುಗಿಯರ ಗುಂಪು ಮುಂದೆ ಇಟ್ಟಿತು. ಹುಡುಗಿಯರು ಮೆರವಣಿಗೆ ಹೋಗಲು ಸಿದ್ಧರಿದ್ದರು. 80 ರ ದಶಕದಲ್ಲಿ ಬರಿಯ ಹೆಂಗಸರ ಮೆರವಣಿಗೆ ಎಂಬುದು ಗ್ರಹಿಸಲೂ ಅಸಾಧ್ಯವಾದ ವಿಚಾರವಾಗಿತ್ತು. ಆ ಸಂದರ್ಭದಲ್ಲಿ ಇವರ ಸಂಘಟನೆಯ ಅಡಿಯಲ್ಲಿ ಮೆರವಣಿಗೆ ಮಾಡುವುದು ಎಂದಾಯಿತು. ಆ ಸಂದರ್ಭದಲ್ಲಿಯೇ ಇವರು ಸಂಘಟನೆಗೆ 'ಮಾನುಷಿ' ಎಂಬ ಹೆಸರನ್ನು ಇಟ್ಟರು.

ಆ ಸಮಯದಲ್ಲಿ ಭಿತ್ತಿ ಚಿತ್ರಗಳನ್ನು ಎಲ್ಲೆಡೆ ಅಂಟಿಸಿದ್ದರು. 'ಮಾನುಷಿ ಯೋಚಿಸಬಲ್ಲ ಮಹಿಳಾ ಸಂಘಟನೆ' ಎಂಬ ಭಿತ್ತಿ ಚಿತ್ರಗಳನ್ನು ಪಟ್ಟಾಂಬಿ ಕಾಲೇಜಿನ ಗೋಡೆಗಳ ಮೇಲೆಲ್ಲಾ ಇವರು ಅಂಟಿಸಿದರು. ಈ ಎಲ್ಲಾ ಕೆಲಸಗಳನ್ನು ವಿದ್ಯಾರ್ಥಿನಿಯರೇ ಮಾಡಿದರು. 60 ಜನ ಹುಡುಗಿಯರು ಭಾಗವಹಿಸಿದ ಮೆರವಣಿಗೆಯಿಂದಾಗಿ ಈ ಸಂಘಟನೆ 'ಮಾನುಷಿ' ಹುಟ್ಟಿದುದಾಗಿ ಸಾರಾ ಜೋಸೆಫ್ ಹೇಳುತ್ತಾರೆ. ಈ ರೀತಿ ಹುಡುಗಿಯರು ಕ್ರಿಯಾಶೀಲರಾಗಿ ಬೀದಿಗೆ ಬಂದು ವಿರೋಧಿಸಿದ್ದರು. ಈ ಎಲ್ಲಾ ಹುಡುಗಿಯರೂ ಅಕ್ಕ-ಪಕ್ಕದ ಹಳ್ಳಿಗಳಿಂದ ಬಂದವರಾಗಿದ್ದರು. ಅವರಿಗೆ ಆಂತರಿಕವಾಗಿ ವಿಶೇಷವಾದ ಶಕ್ತಿ ಹಾಗೂ ಸ್ಥೈರ್ಯಗಳಿದ್ದವು. 'ಮಾನುಷಿ'ಯಲ್ಲಿ ಎಸ್.ಎಫ್.ಐ. ಪ್ರತಿನಿಧಿಗಳು, ಯುವಜನವೇದಿ ಪ್ರತಿನಿಧಿಗಳೂ ಕೂಡಾ ಕ್ರಮೇಣವಾಗಿ ಭಾಗವಹಿಸುತ್ತಿದ್ದರು. ಈ ಸಂಘಟನೆ ಮಹಿಳೆಯರ ಸಮಸ್ಯೆಗಳ ಬಗ್ಗೆಯೇ ಚರ್ಚಿಸಬೇಕು ಹಾಗೂ ಇದು ಯಾವ ರೀತಿಯ ರಾಜಕೀಯ ಪಕ್ಷಕ್ಕೂ ಸೇರಬಾರದೆನ್ನುವ ಬಗ್ಗೆ ತಮಗೆ ಸ್ಪಷ್ಟವಾದ ನಿಲುವಿತ್ತು ಎಂದು ಸಾರಾ ಜೋಸೆಫ್ ನುಡಿಯುತ್ತಾರೆ.

'ಮಾನುಷಿ' ಯಾವುದೇ ರಾಜಕೀಯ ಗುಂಪಿನ ಭಾಗವಾಗದಿದ್ದಾಗ್ಯೂ ಸಹ ಇವರಿಗೆ 'ಮಾರ್ಕ್ಸಿಸ್ಟ್' ದೃಷ್ಟಿಕೋನವಿತ್ತು. ಏಕೆಂದರೆ ಮಾರ್ಕ್ಸವಾದ ಹೆಂಗಸರ ಬಗ್ಗೆ ಹೆಚ್ಚಿನ ಚರ್ಚೆಗೆ ಅವಕಾಶ ಮಾಡಿಕೊಟ್ಟಿತ್ತು ಎಂದು ಲೇಖಕಿ ಅಭಿಪ್ರಾಯಪಡುತ್ತಾರೆ. ಆದರೆ ಕ್ರಮೇಣ ಮಹಿಳೆಯರ ಸಮಸ್ಯೆಗಳನ್ನು ಬರಿಯ ವರ್ಗದ ಸಮಸ್ಯೆಯಾಗಿ ಮಾತ್ರವಲ್ಲ. ವಿಶಿಷ್ಟ ಸಮಸ್ಯೆಗಳನ್ನು ಬೇರೆಯ ದೃಷ್ಟಿಕೋನದಿಂದ ಕೂಡಾ

ನೋಡಬೇಕಾಗುತ್ತದೆ ಎಂಬುದು 'ಮಾನುಷಿ'ಯ ಚಿಂತನೆಯಾಗಿತ್ತು. ಯುವಜನ ವೇದಿಕೆಯ ದೃಷ್ಟಿಕೋನ ಕೂಡಾ ಇವರಿಗೆ ಸ್ಫೂರ್ತಿಯಾಗಿತ್ತು. ಏಕೆಂದರೆ ವರ್ಗದ ಸಮಸ್ಯೆ ಬಗೆಹರಿದರೆ ಮಹಿಳಾ ಸಮಸ್ಯೆ ಬಗೆಹರಿಯುವುದಿಲ್ಲ ಎಂಬ ಒಳನೋಟವನ್ನು ಆ ಸಂದರ್ಭದಲ್ಲಿ ಯುವಜನ ವೇದಿಕೆ 'ಮಾನುಷಿ' ಯೊಂದಿಗೆ ಚರ್ಚೆ ಮಾಡಿತ್ತು. ಹೀಗಾಗಿ ವರ್ಗ ಸಮಸ್ಯೆಯೊಂದಿಗೆ ಮಹಿಳಾ ಸಮಸ್ಯೆಯ ಪ್ರಶ್ನೆ ಬಗೆಹರಿಯುವುದಿಲ್ಲ ಎಂಬ ನಿಲುವನ್ನು 'ಮಾನುಷಿ' ತೆಗೆದುಕೊಂಡಾಕ್ಷಣ, ಎಸ್.ಎಫ್. ಐ. ನವರು 'ಮಾನುಷಿ' ಗೆ ಬರುವುದನ್ನು ಬಿಟ್ಟರು. ಈ ವಿಚಾರಗಳು ಮಾರ್ಕ್ಸಿಷ್ಟ ಪಕ್ಷದೊಳಗೆ ಗಂಭೀರವಾಗಿ ಚರ್ಚೆಯಾಯಿತು. ಆದರೆ 'ಮಾನುಷಿ' ಸಂಘಟನೆಯ ಜೊತೆಗಲ್ಲ ಎಂದು ಸಾರಾ ಜೋಸೆಫ್ ನುಡಿಯುತ್ತಾರೆ.

ಮೇರಿ ರಾಯ್ ಸಮಸ್ಯೆಯಲ್ಲಿ 'ಮಾನುಷಿ' ಆಕೆಗೇ ಬೆಂಬಲ ಸೂಚಿಸಿತು. ಕ್ರಿಶ್ಚಿಯನ್ ಮಹಿಳೆಯರ ಪಿತ್ರಾರ್ಜಿತ ಆಸ್ತಿಯ ಹಕ್ಕುಗಳಿಗೆ ಎಲ್ಲಾ ಮಹಿಳೆಯರು ಬೆಂಬಲ ನೀಡಬೇಕು. ಇದೇ ಸಂದರ್ಭದಲ್ಲಿ ಮೇರಿ ರಾಯ್ ಹಾಗೂ ಅವರ ಮನೆಗೆಲಸದವಳ ಮಧ್ಯೆ ವರ್ಗ ಸಂಘರ್ಷ ಇದ್ದರೆ ತಾವು ಮನೆಗೆಲಸದವಳನ್ನೇ ಬೆಂಬಲಿಸುವುದಾಗಿ ಸಾರಾ ಜೋಸೆಫ್ ನುಡಿಯುತ್ತಾರೆ. ಮೇರಿ ರಾಯ್ ರವರನ್ನು ಒಂದು ಸಮಸ್ಯೆಗೆ ಸಂಬಂಧ ಪಟ್ಟಂತೆ ಸಮರ್ಥಿಸುವುದು, ಇನ್ನೊಂದಕ್ಕೆ ಸಂಬಂಧಪಟ್ಟಂತೆ ವಿರೋಧಿಸುವುದು - 'ವರ್ಗ ಸಂಘರ್ಷದ ' ಮುಂದುವರಿದ ಭಾಗ ಎಂಬುದಾಗಿ ಸಾರಾ ಜೋಸೆಫ್ ನುಡಿಯುತ್ತಾರೆ.

'ಮಾನುಷಿ' ಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಯಾವ ವಿಚಾರಧಾರೆಯ ಅಡಿಗಲ್ಲು ಇರಬೇಕೆಂಬುದನ್ನು ತಾವು ದೀರ್ಘವಾಗಿ ಚರ್ಚಿಸಿದುದಾಗಿ ಸಾರಾ ಜೋಸೆಫ್ ನುಡಿಯುತ್ತಾರೆ. ಅವರು ಅನೇಕ ಕ್ರಾಂತಿಕಾರಿಗಳೊಂದಿಗೆ ಮಾನುಷಿಯಂತಹ ಗುಂಪಿನ ಸಾಧ್ಯತೆಗಳ ಬಗ್ಗೆ ಚರ್ಚಿಸಿದ್ದರು. ಕೆ. ವೇಣು, ಕೆ.ಎನ್. ರಾಮಚಂದ್ರನ್, ಕೆ.ಎ. ಮೋಹನ್‌ದಾಸ್ ಇಂತಹ ಕ್ರಾಂತಿಕಾರಿಗಳೊಂದಿಗೆ ಇವರು ಚರ್ಚೆ ನಡೆಸಿ ಅವರ ಅಭಿಪ್ರಾಯಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ್ದರು. ಯಾರು ಚರ್ಚೆಗೆ ಸಿದ್ಧರಿದ್ದರೋ ಅಂತಹವರ ಜೊತೆ 'ಮಾನುಷಿ' ಸಂವಾದ ನಡೆಸಿತ್ತು. ಇದರಲ್ಲಿ ಹಲವರು ಮಹಿಳೆಯರ ಸಮಸ್ಯೆ 'ಫೆರಿಫೆರಲ್' ಎಂದೂ, ಯಾವಾಗ 'ಸೆಂಟ್ರಲ್' ಸಮಸ್ಯೆ ಬಗೆಹರಿಯುತ್ತದೆಯೋ ಆಗ ಮಹಿಳೆಯರ ಸಮಸ್ಯೆಗಳೂ ಪರಿಹಾರವಾಗುತ್ತವೆ ಎಂದಿದ್ದರು. ಆದರೆ ಕೆ. ವೇಣು ನಂತವರು ಇಂತಹ ವಿಚಾರಧಾರೆಯನ್ನು ಒಪ್ಪಿರಲಿಲ್ಲ. ಅವರು ಅವರ ಪತ್ರಿಕೆಗಳಲ್ಲಿ ಸ್ವಾಯತ್ತ ಮಹಿಲಾ ಗುಂಪುಗಳ ಅಗತ್ಯವನ್ನು ಕುರಿತು ಬರೆದಿದ್ದರು. ಅದು ವರ್ಗ-ಸಂಘರ್ಷದ ದೃಷ್ಟಿಕೋನವನ್ನು ಮಾತ್ರ ಒಳಗೊಂಡಿರಲಿಲ್ಲ.

ಅಜಿತ ಸಭೆಗಳಲ್ಲಿ ಭಾಗವಹಿಸಿದಿದ್ದಾಗ್ಯೂ ಸಹ ಇವರು ಕರೆದ ಬೃಹತ್ ಸಭೆಯೊಂದರಲ್ಲಿ ಅವರು ಭಾಗವಹಿಸಿದ್ದರು. 'ಮಾನುಷಿ' ಮುಖ್ಯ ಉದ್ದೇಶ ಮಾರ್ಕ್ಸವಾದಿ ದೃಷ್ಟಿಕೋನವನ್ನು ವಿಸ್ತರಿಸುವುದಾಗಿತ್ತು. ಹಾಗೂ ಮಹಿಳಾ ನಾಯಕತ್ವ ಹೊಂದುವುದೂ ಆಗಿತ್ತು. ಕೆಲಸದ ಸ್ಥಳಗಳಲ್ಲಿ, ಪಕ್ಷಗಳಲ್ಲಿ ಮಹಿಳೆಯರು ತಮ್ಮ ಸ್ವಂತಿಕೆ ಕಾಯ್ದುಕೊಳ್ಳುವುದು ಮುಖ್ಯ. ಸಾರಾ ಜೋಸೆಫ್ ಸಮಾಜವಾದಿ ಹಾಗೂ ಸ್ತ್ರೀವಾದಿ ದೃಷ್ಟಿಕೋನವಿಟ್ಟುಕೊಂಡು ಮಾನುಷಿ ಕೆಲಸ ಮಾಡಿದುದಾಗಿ ಹೇಳುತ್ತಾರೆ. ಆದಾಗ್ಯೂ ಇತರ ಸ್ತ್ರೀವಾದಿ ಚಳುವಳಿಗಳ ತಾತ್ವಿಕ ನೋಟಗಳನ್ನೂ ಸಮಾಜವಾದಿ ಸ್ತ್ರೀವಾದಿ ಚಳುವಳಿ ಅಳವಡಿಸಿಕೊಳ್ಳಬೇಕಾಗುತ್ತದೆ. ರ್‍ಯಾಡಿಕಲ್ ಸ್ತ್ರೀವಾದಿ ದೃಷ್ಟಿಕೋನ ಮಹಿಳೆಯರಿಗೆ ಒಂದು ಹೆಜ್ಜೆ ಮುಂದು ಹೋಗಲು ಅನುವು ಮಾಡಿ ಕೊಟ್ಟಿದೆ. ರ್‍ಯಾಡಿಕಲ್ ಸ್ತ್ರೀವಾದಿ ಚಳುವಳಿಯಲ್ಲಿ ಏನೇ ಮಿತಿಗಳಿದ್ದರೂ ಅವರ ಸಾಧನೆಗಳನ್ನು ಗುರುತಿಸಬೇಕು. ತಪ್ಪುಗಳಿದ್ದರೆ ಅವುಗಳನ್ನು ಸರಿ ಮಾಡುತ್ತಾ ನಡೆಯಬೇಕು. ಈ ರೀತಿಯ ಚರ್ಚೆಗಳ ಮೂಲಕ 'ಮಾನುಷಿ' ಒಂದು ಮಹಿಳಾ ವಿಮೋಚನಾ ಸಂಘಟನೆ ಎಂದು ಬೆಳೆಯುತ್ತಾ ಹೋಯಿತು. ಹೀಗೆ ಮಹಿಳಾ ವಿಮೋಚನಾ ಸಂಘಟನೆ ಎಂದು 'ಮಾನುಷಿ' ಬೆಳೆಯ ತೊಡಗಿದಾಗ ಕಾಲೇಜಿನ ವಾತಾವರಣಕ್ಕೆ ಮಾತ್ರ ಚಟುವಟಿಕೆಗಳನ್ನು ನಿರ್ಬಂದಿಸಲು ಸಾಧ್ಯವಾಗಲಿಲ್ಲ. ಹಾಗಾಗಿ ಬೇರೆ ಬೇರೆಯವರನ್ನು ಸಂಪರ್ಕಿಸಿ 1982ರಲ್ಲಿ ಜವನೂರಿನಲ್ಲಿ ಮೊದಲಬಾರಿಗೆ ಒಂದು ದಿನದ ಕ್ಯಾಂಪನ್ನು ಸಂಘಟಿಸಿದರು. ತಿರುವನಂತಪುರಂನಿಂದ ಕಾಸರಗೊ ಡಿನವರೆಗಿನ ಮಹಿಳೆಯರು ಬಹಳ ಸಂಖ್ಯೆಯಲ್ಲಿ ಈ ಕ್ಯಾಂಪ್‌ನಲ್ಲಿ ಭಾಗವಹಿಸಿದ್ದರು.

ಕ್ಯಾಂಪನ ಮುಖ್ಯ ಉದ್ದೇಶ ಮಹಿಳಾ ಚಳುವಳಿಗೆ ಒಂದು ರೂಪರೇಖೆ ಕೊಡುವುದಾಗಿತ್ತು. ಹಾಗೂ ಎಲ್ಲಾ ಮಹಿಳೆಯರನ್ನೂ ಒಂದು ಗೂಡಿಸುವುದಾಗಿತ್ತು. ಕೂಲಿ ಕಾರ್ಮಿಕ ಮಹಿಳೆಯರು, ಮನೆಯಲ್ಲಿ ಇರುವ ಗೃಹಿಣಿಯರು ಹಾಗೂ ಇತರ ಎಲ್ಲರನ್ನೂ ಒಗ್ಗೂಡಿಸಿ ಮಹಿಳೆಯರ ಸಮಸ್ಯೆಗಳನ್ನು ಬಗೆಹರಿಸಲು ಸಂಘಟನೆಯನ್ನು ದೊಡ್ಡ ಹಂತದಲ್ಲಿ ಕಟ್ಟುವುದೂ ಕೂಡಾ ಈ ಕ್ಯಾಂಪಿನ ಉದ್ದೇಶವಾಗಿತ್ತು. ಈ ಸಂಘಟನೆಯಲ್ಲಿ ಹೆಂಗಸರೇ ನಿರ್ಧಾರ ಮಾಡುವ ಹಕ್ಕು ಹೊಂದಿರಬೇಕೆಂಬುದೂ ಕೂಡಾ ಮುಖ್ಯವಾಗಿತ್ತು. ಸಾರಾ ಜೋಸೆಫ್ 'ಅಜಿತ' ರವರನ್ನು ಮೊದಲು ನೋಡಿದ್ದು ಇಲ್ಲಿಯೇ. ತಿರುವನಂತಪುರದ 'ಪ್ರಚೋದನ' ಸಂಸ್ಥೆಯವರೂ ಇದರಲ್ಲಿ ಭಾಗವಹಿಸಿದ್ದರು. ಜಿ.ಗೀತ ಗಂಗಾ, ಡಾ.ಎ.ಕೆ. ಜಯಶ್ರೀ

ಎಲ್ಲರಿಗೂ ಕೆಲಸಮಾಡಿದ ಅನುಭವವಿತ್ತು. ಸಾರಾ ಜೋಸೆಫ್ ಹಾಗೂ ಇತರ ಉಪನ್ಯಾಸಕಿಯರಿಗೆ ಅನೇಕ ಮುಜುಗರಗಳಿದ್ದವು. ವಿದ್ಯಾರ್ಥಿನಿಯರಿಗೂ ಕೂಡಾ. 'ಮಾನುಷಿ' ಯವರಿಗೆಲ್ಲ ಬಹಳ ಹೆದರಿಕೆ ಎನ್ನಿಸಿತ್ತು. ಉಪನ್ಯಾಸಕಿ ಹಾಗೂ ವಿದ್ಯಾರ್ಥಿನಿಯರೆಲ್ಲ ಪ್ರಥಮ ಬಾರಿಗೆ ಸಾರ್ವಜನಿಕವಾಗಿ ಮಹಿಳೆಯರನ್ನು ಭೇಟಿಯಾದುದು ಇದೇ ಮೊದಲು ಸಲವಾಗಿತ್ತು.

ಚರ್ಚೆಯ ವಿಚಾರ 'ಕುಟುಂಬ'. ತಿರುವನಂತರದ ಮಹಿಳೆಯೋರ್ವಳು ಈ ಬಗ್ಗೆ ಒಂದು ಪೇಪರ್ ಮಂಡಿಸಿದ್ದಳು. ಆಕೆ ಎಲ್ಲಾ ತಾತ್ವಿಕ ವಿಚಾರಗಳ ಬಗ್ಗೆ ಹೆಚ್ಚು ಜ್ಞಾನವಿದ್ದವಳು. 'ಕುಟುಂಬ' - ಒಂದು ಸಂಸ್ಥೆಯಾಗಿದೆ, ಅದನ್ನು ಮುರಿಯಬೇಕು ಎಂದು ಆಕೆ ಹೇಳಿದ್ದರು. ಹೊಸಬರಿಗೆ ಅದೊಂದು ಆಘಾತಕರ ಮಾತಾಗಿತ್ತು. ಪಟ್ಟಾಂಬಿಯ ಸುತ್ತ ಮುತ್ತಲ ಹಳ್ಳಿಯಿಂದ ಬಂದ ಹೆಂಗಸರಿಗಂತೂ ಅದೊಂದು ಆಶ್ಚರ್ಯಭರಿತ ಆಘಾತಕರ ವಿಚಾರವಾಗಿತ್ತು.

ಆ ನಂತರದಲ್ಲಿ 'ಮಾನುಷಿ' ಯವರೂ ಕೂಡಾ 'ಕುಟುಂಬದ' ಸಂಸ್ಥೆ ಬಗ್ಗೆ ಗಂಭೀರವಾಗಿ ಆಲೋಚಿಸಲು ಪ್ರಾರಂಭಿಸಿದ್ದರು. 'ಮಾನುಷಿ' ಯವರು ನಡೆಸಿದ ಒಂದು ದಿನದ ಕ್ಯಾಂಪ್ ಚಾರಿತ್ರಿಕವಾಗಿ ಮಹತ್ವವಾದ ಸಭೆಯಾಗಿತ್ತು. ಆನಂತರ ಕೇರಳದಲ್ಲಿ ಅನೇಕ ಮಹಿಳಾ ಸಂಘಟನೆಗಳು ಹುಟ್ಟಿದವು.

'ಮಾನುಷಿ' ಯಲ್ಲಿದ್ದ ಹೆಚ್ಚು ವಿದ್ಯಾರ್ಥಿನಿಯರು ನಂಬೂದರಿ ಕುಟುಂಬಗಳಿಂದ ಬಂದವರು. ಇವರಿಗೆ ಮಧ್ಯಮ ಅಥವಾ ಕೆಳ ಜಾತಿಯ ಹುಡುಗಿಯರಿಗಿಂತ ಕುಟುಂಬಗಳಲ್ಲಿ ಹೆಚ್ಚು ಸಮಸ್ಯೆಗಳಿದ್ದವು. 'ನಾವು ಮನೆ ಬಿಡಬೇಕೆ ?' 'ನಾವು ಮನೆ ಬಿಟ್ಟರೆ ಎಲ್ಲಿ ಇರಬಲ್ಲೆವು?' ಈ ಪ್ರಶ್ನೆಗಳಿಗೆ ಹೌದು ಎನ್ನುವುದು ಕಷ್ಟ - ಅವರಿಗಾಗಿ ನಾವೇನು ಮಾಡಬಹುದಿತ್ತು ? ಸಂಘಟನೆಗೆ ಯಾವುದೇ ಹಣ ಕಾಸಿನ ನೆರವು ಅಥವಾ ಸಾಮಾಜಿಕ ಸಂಸ್ಥೆಗಳ ಬೆಂಬಲವಿರಲಿಲ್ಲ. ಅವರನ್ನು ಚಳುವಳಿಯಲ್ಲಿ 'ಪೂರ್ಣಕಾಲಿಕ ಕೆಲಸಗಾರರು' ಎಂದು ನಿಯಮಿಸಿಕೊಳ್ಳಲಿಕ್ಕೂ ಸಾಧ್ಯವಿರಲಿಲ್ಲ.

ಕೆಲವು ವಿದ್ಯಾರ್ಥಿನಿಯರು ಬೀದಿಗಿಳಿದು ಹೋರಾಡುವುದಕ್ಕೂ ಸಿದ್ಧರಿದ್ದರು. ನಿಜವೆಂದರೆ ಅವರೇ 'ಮಾನುಷಿ' ಕಟ್ಟಿದವರು ಹಾಗೂ ಬೆಳೆಸಿದವರು. ಈ ವಿದ್ಯಾರ್ಥಿನಿಯರಿಂದಾಗಿಯೇ ಕೇರಳದಲ್ಲಿ ಮಹಿಳಾ ಸಮಸ್ಯೆಗಳನ್ನು ಇತರ ಗುಂಪುಗಳಲ್ಲಿ ಕೂಡಾ ಚರ್ಚಿಸುವಂತಾಯಿತು ಎಂದು ಸಾರಾ ಜೋಸೆಫ್ ಅಭಿಪ್ರಾಯ ಪಡುತ್ತಾರೆ.

'ಮಾನುಷಿ' 80 ರ ದಶಕದಲ್ಲಿ ಹೆಚ್ಚು ಕ್ರಿಯಾಶೀಲವಾಗಿದ್ದುದು, 90 ರ ದಶಕದಲ್ಲಿ ಗುಂಪು ಒಡೆದು ಹೋಯಿತು. ಹಾಗಾಗಿ ಎಲ್ಲಾ ಚಟುವಟಿಕೆಗಳೂ ನಿಂತು ಹೋದವು. ವಿದ್ಯಾರ್ಥಿನಿಯರು ಅವರೇ ಚಟುವಟಿಕೆಗಳ್ನು ನಡೆಸಿಕೊಂಡು ಹೋಗಲು ಸಾಧ್ಯವಾಗಲಿಲ್ಲ. ಅನೇಕ ರಾಜಕೀಯ ಪಕ್ಷಗಳು 'ಮಾನುಷಿ' ಯನ್ನು ಒಡೆಯಲೂ ಕೂಡಾ ಪ್ರಯತ್ನಿಸಿದವು. ಕೊನೆಗೆ ಅಲ್ಲಿ ಉಳಿದದ್ದು 4 ಜನ ಉಪನ್ಯಾಸಕಿಯರು ಮಾತ್ರ . ಈ ನಾಲ್ಕು ಜನರೂ ಬೇರೆ ಬೇರೆ ಸಂಸ್ಥೆಗೆ ವರ್ಗವಾದ ಮೇಲೆ 'ಮಾನುಷಿ' ಯ ಗುಂಪು ಒಡೆದು ಚದುರಿಹೋಯಿತು.

ಸಂದರ್ಶನ
ಗೀತಾ ಹರಿಹರನ್
From
Just between us
Edited by : Ammu Joseph,
Vasantha Kannabiran
Ritu Menon,Gouri Selvi,Volga

## ಲೈಂಗಿಕ ದುರ್ಬಳಕೆಯ ಎರಡು ಪ್ರಕರಣಗಳು

ನನಗಾಗ ಏಳು ವರ್ಷ, ಎರಡನೆಯ ತರಗತಿಯಲ್ಲಿದ್ದೆ. ನನ್ನ ಅಂಕಲ್ ನನ್ನನ್ನು ತುಂಬಾ ಪ್ರೀತಿಸುತ್ತಾರೆ. ಏಕೆಂದರೆ ನಾನು ನೋಡಲು ಚೆನ್ನಾಗಿದ್ದೇನೆಂದು ಹೇಳುತ್ತಾರೆ. ನನ್ನೊಡನೆ ಆಡುವುದೆಂದರೆ ಅವರಿಗೆ ಇಷ್ಟ. ಅಂಥ ಆಟವನ್ನು ನಾನು ಇನ್ನ್ಯಾರೊಂದಿಗೂ ಆಡುವುದಿಲ್ಲ. ನನ್ನನ್ನು ತಬ್ಬಿಕೊಂಡು ಮುತ್ತಿಡುವ ರೀತಿ ನನಗಿಷ್ಟವಾಗುವುದಿಲ್ಲ. ನನಗವರು ಏನೇನನ್ನೋ ಮಾಡಲು ಹೇಳುತ್ತಾರೆ. ಇದು ನಮ್ಮ ನಡುವಿನ ಗುಟ್ಟು ಎಂದೆನ್ನುತ್ತಾರೆ. ಈ ಗುಟ್ಟು ನನಗಿಷ್ಟವಾಗುವುದಿಲ್ಲ. ಆದರೆ ಏನು ಮಾಡಲೂ ತೋಚುತ್ತಿಲ್ಲ. ಅಮ್ಮನಿಗೆ ಹೇಳಲು ಭಯವಾಗುತ್ತದೆ. ಏಕೆಂದರೆ ಅವಳು ಅಂಕಲ್‌ನನ್ನು ತುಂಬಾ ಇಷ್ಟ ಪಡುತ್ತಾಳೆ. ನನ್ನನ್ನವಳು ನಂಬುವುದಿಲ್ಲ, ಎನ್ನುತ್ತಾಳೆ ಪುಟ್ಟ ಹುಡುಗಿ ಕಲ್ಪನಾ.

'ನನಗೆ ನಾಚಿಕೆ, ಅಸಹ್ಯ, ತಪ್ಪಿತಸ್ಥಭಾವ ಮತ್ತು ಆತ್ಮಗೌರವದ ಕೊರತೆಯ ಭಾವನೆಗಳುಂಟಾಗಿದೆ. ನಾನದನ್ನು ಪ್ರೀತಿ ಎಂದು ಇಷ್ಟು ದಿನ ಭಾವಿಸಿದ್ದೆ. ನನ್ನ ಅಂಕಲ್ ಜೊತೆಗಿನ ಹನ್ನೆರಡು ವರ್ಷಗಳ ಸಂಬಂಧ ಲೈಂಗಿಕ ದುರ್ಬಳಕೆಯೆಂದು ನನಗೀಗ ಅರ್ಥವಾಗಿದೆ. ಎಂದು ಹದಿನೈದು ವರ್ಷಗಳ ಕಿಶೋರಿ ಅಂಜನಾ ಹೇಳುತ್ತಾಳೆ.

'ದಿ ಹಿಂದು'
14-10-2003
ಕನ್ನಡಕ್ಕೆ: ವೆಂ.ವನಜ

# ಕೊನೆಗೂ ದೊರೆತ ನ್ಯಾಯ

ಪವಿತ್ರ ಹದಿನಾಲ್ಕು ವರ್ಷದ. ಬಾಲಕಿ. ತಂದೆ - ತಾಯಿ ಇಲ್ಲದ ಬಾಲಕಿ. ಅವಳ ಬಂಧುವೆಂದರೆ ಅವಳ ಅಜ್ಜಿ ಮಾತ್ರ. ಬಾಲ ಕಾರ್ಮಿಕಳಾಗಿದ್ದ ಆಕೆಯನ್ನು ಏಕಲವ್ಯ ಸಂಸ್ಥೆಗೆ ಸೇರಿಸಲಾಯಿತು. ಈ ಸಂಸ್ಥೆ ಚಿತ್ರದುರ್ಗದಲ್ಲಿ ಇದ್ದು ಪವಿತ್ರಳಂತೆ ಹಲವಾರು ಬಾಲಕಿಯರು ಈ ಸಂಸ್ಥೆಯ ಆಶ್ರಯವನ್ನು ಪಡೆದಿದ್ದರು. ಈಕೆ ವಾಸವಾಗಿರುವಲ್ಲಿ ಎಣ್ಣೆ. ಸೋಪು, ಸ್ನಾನಕ್ಕೆ ಅನುಕೂಲವಿಲ್ಲದುದ್ದರಿಂದ ಆಕೆಯನ್ನು ಮಾಗಡಿಯ ಕನಸು ಶಾಲೆಗೆ ಕರೆತರಲಾಗುತ್ತಿತ್ತು. ಹೀಗೆ ಈಕೆ ಬಂದಾಗಲೆಲ್ಲಾ ಒಂದೆರೆಡುದಿನ ಇಲ್ಲಿಯೇ ಉಳಿಯುತ್ತಿದ್ದಳು. ಈಕೆ ಇಲ್ಲಿ ಉಳಿದಾಗಲೆಲ್ಲಾ ಬಾಲ ಕಾರ್ಮಿಕ ವಿರೋಧಿ ಸಂಸ್ಥೆಯ ವಿಶ್ವಸಾಗರ ಇಲ್ಲಿಗೆ ಬರುತ್ತಿದ್ದ. ಈತ ಬಂದಾಗಲೆಲ್ಲಾ ಹುಡುಗಿಯರ ಮದ್ಯ ನಗ್ನನಾಗಿ ಮಲಗುತ್ತಿದ್ದ. ಪವಿತ್ರ ಮಿಡ್ಡಿ ಹಾಕಿಕೊಂಡು ಮಲಗುತ್ತಿದ್ದಳು. ಈತ ಪವಿತ್ರಳನ್ನು ಲೈಂಗಿಕವಾಗಿ ಶೋಷಿಸ ತೊಡಗಿದ. ಆಕೆ ಅಲ್ಲಿಯೇ ಇದ್ದ ಒಂದು ಗುಡಿಸಲು ಮನೆಯಲ್ಲಿ ಕೆಲವು ಬಾರಿ ಮಲಗುತ್ತಿದ್ದಳು. ಆಗ ಈತ ಅಲ್ಲಿ ಹೋಗಿ ಈಕೆಯ ಪಕ್ಕದಲ್ಲಿ ಮಲಗುತ್ತಿದ್ದ. ಕೆಲವು ದಿನಗಳ ನಂತರ ಪವಿತ್ರಳನ್ನು ಮುಂದಿನ ವಿದ್ಯಾಭ್ಯಾಸಕ್ಕಾಗಿ 'ಚಿಗುರು' ಸಂಸ್ಥೆಯ ಸರೋಜರವರ ಹತ್ತಿರ ಕಳಿಸಲಾಯಿತು. ಪವಿತ್ರ ಇಲ್ಲಿ ಶಾಲೆಗೆ ಸೇರಿಕೊಂಡು, ಸರಿಯಾಗಿ ಶಾಲೆಗೆ ಹೋಗುತ್ತಿರಲಿಲ್ಲ. ಸದಾ ಮೌನವಾಗಿರುತ್ತಿದ್ದಳು, ಈಕೆ ಹೀಗೆ ಇರುವುದನ್ನೂ ನೋಡಿ ಸರೋಜರವರು ವಿಚಾರಿಸಿದಾಗ ಪವಿತ್ರ ತನಗೆ ಹೊಟ್ಟೆ ನೋವೆಂದು ಹೇಳಿದಳು. ಸರೋಜ ಆಕೆಯನ್ನು ನೆಲಮಂಗಲದಲ್ಲಿ ವೈದ್ಯರಾಗಿರುವ ಡಾ॥ಮಲ್ಲಮ್ಮ ಎಂಬುವರ ಬಳಿ ಕರೆತಂದರು. ವೈದ್ಯರು ಆಕೆಯನ್ನು ಪರೀಕ್ಷಿಸಿ, ಆಕೆ ಗರ್ಭಿಣಿ ಯಾಗಿರುವ ವಿಚಾರವನ್ನು ಸರೋಜಾರವರಿಗೆ ತಿಳಿಸಿದರು. ತಕ್ಷಣ ಸರೋಜರವರು ವಿಶ್ವಸಾಗರರವರಿಗೆ ಈ ವಿಷಯವನ್ನು ತಿಳಿಸಿದಳು. ತಕ್ಷಣವೇ ವಿಶ್ವ ಸಾಗರ್, ನೆಲಮಂಗಲದ ಇನ್ನೊಬ್ಬ ವೈದ್ಯೆ ಡಾ॥ಸುಶೀಲಾದೇವಿ ರವರನ್ನು ಕಂಡು ಆಕೆಗೆ ಗರ್ಭಪಾತ ಮಾಡಿಸಿದನು.

ಈ ವಿಷಯವನ್ನು ಗಂಭೀರವಾಗಿ ಚರ್ಚಿಸಿದ ಬಾಲಕಾರ್ಮಿಕ ವಿರೋಧಿ ಸಂಸ್ಥೆ ಹಾಗೂ ಇತರ ಸ್ವಯಂಸೇವಾ ಸಂಸ್ಥೆಯವರು, ಪವಿತ್ರಾಳನ್ನು ಕೌನ್ಸಿಲಿಂಗ್‌ಗಾಗಿ ಮೈಸೂರಿಗೆ ಕಳಿಸುವುದೆಂದು ತೀರ್ಮಾನಿಸಿದರು. ನಂತರ ಆಕೆಯನ್ನು ಮೈಸೂರಿಗೆ ಕಳಿಸಲಾಯಿತು.

ದಿನಾಂಕ 27-9-2002 ರಂದು ಪವಿತ್ರ ವಿಶ್ವಸಾಗರ ತನ್ನ ಮೇಲೆ 1½ ವರ್ಷದಿಂದ ಲೈಂಗಿಕ ಶೋಷಣೆ ನಡೆಸುತ್ತಿದ್ದನೆಂದು ದೂರು ನೀಡಿದಳು. ಈ ಘಟನೆಯನ್ನು ಸಿ.ಓ.ಡಿ. ತನಿಖೆ ನಡೆಸಿದ್ದು, ಆರೋಪ ಸಾಬೀತಾಗಿದ್ದು ಚಿತ್ರದುರ್ಗದ ನ್ಯಾಯಾಲಯದಲ್ಲಿ ದಾವೆ ಹಾಕಲಾಗಿತ್ತು. ಜೂನ್ 20/2005 ರಲ್ಲಿ ತೀರ್ಪು ಹೊರಬಿದ್ದಿದೆ.

ಅಪರಾಧಿಯ ಪರವಾಗಿ ಮಾಮೂಲಿಯಾಗಿ, ಹಾಗೂ ಸಾಮಾನ್ಯವಾಗಿ ಬಳಸುವ ವಾದವನ್ನೆ ಮುಂದಿಡಲಾಗಿದೆ. ಬೀರೇಗೌಡ ರಾಜ್ಯಸರ್ಕಾರ ಕೇಸಿನಲ್ಲಿ "ಆರೋಪಿಯು ಹೊರಟು ಹೋದ ನಂತರ, ಅತ್ಯಾಚಾರಕ್ಕೊಳಗಾದ ಮಹಿಳೆಯ ಬಟ್ಟೆ ಹರಿದಿದ್ದು , ದೇಹದ ಮೇಲಿರುವ ಗಾಯ, ಮುಂತಾದ ಅಂಶಗಳಿಂದ, ಆಕೆ ಒಪ್ಪಿಗೆ ಕೊಟ್ಟಿದ್ದಳೇ ಅಥವಾ ಬಲಾತ್ಕಾರ ನಡೆಯಿತೆ ಎಂಬುದನ್ನು ನಿರ್ಧರಿಸ ಬಹುದು. ವೈದಕೀಯ ವರದಿ ಇಲ್ಲದಿರುವುದು, ಅಪರಾದ ನಡೆದಿರುವುದಕ್ಕೆ ಯಾವುದೇ ಬಲವಾದ ಸಾಕ್ಷಿಗಳು ಇಲ್ಲದ ಕಾರಣ ಆರೋಪಿಯನ್ನು ಬಿಡುಗಡೆ ಮಾಡಲಾಯಿತು. ಈ ನಿದರ್ಶನವನ್ನು ಇಲ್ಲಿಯೂ ಸಹ ನೀಡಲಾಯಿತು.

ಆದರೆ, ನ್ಯಾಯಾಲಯ ಇದನ್ನು ಸಮರ್ಥವಾಗಿ ಈ ಘಟನೆಯಲ್ಲಿ ವಿಶ್ಲೇಷಿಸಿದೆ. ಇಲ್ಲಿ ಆರೋಪಿಯು ಬಾಲಕಿಯೊಂದಿಗೆ ಸಂಭೋಗ ನಡೆಸಿದ್ದನೆಂದಾಗಲೀ, ಬಾಲಕಿಯ ಸಹ ಈ ವಿಚಾರವನ್ನು ಹೇಳಿರುವುದಿಲ್ಲ, ಹಾಗಾಗಿ ಇಲ್ಲಿ ಒಪ್ಪಿಗೆಯ ಪ್ರಶ್ನೆ ಬರುವುದೇ ಇಲ್ಲ ವೆಂದು ನ್ಯಾಯಾಲಯ ಅಭಿಪ್ರಾಯ ಪಟ್ಟಿತು.

ಪವಿತ್ರಾಳಿಗೆ 18 ವರ್ಷ ವಯಸ್ಸಾಗಿದ್ದು ಆಕೆ ಮೇಜರ್ ಆಗಿರುವುದರಿಂದ, ಆಕೆಯ ಒಪ್ಪಿಗೆಯ ಮೇಲೆಯೇ ಈ ಕೃತ್ಯ ನಡೆದಿದೆ ಎಂಬ ವಾದವನ್ನು ಆರೋಪಿಯ ಪರವಾಗಿ ಇಡಲಾಯಿತು. ಇದನ್ನು ಸಮರ್ಥಿಸುವ ಸಲುವಾಗಿ ಕೆಲವು ನಿದರ್ಶನವನ್ನು ನೀಡಲಾಗಿತ್ತು. ಪವಿತ್ರಾಳ ಜನ್ಮದಿನಾಂಕದ ದಾಖಲಾತಿಯನ್ನು ನೀಡಲಾಗಿದ್ದು, ಆಕೆಯು ಮೈನರ್ ಎಂಬುದನ್ನು ನ್ಯಾಯಾಲಯ ಒಪ್ಪಿಕೊಂಡಿತು.

ಪವಿತ್ರ ಮುಗ್ಧವಾದ ಹುಡುಗಿ, ಆಕೆಗೆ 'ಬಲಾತ್ಕಾರ' ಎಂಬುದರ ಪರಿಚಯವಿಲ್ಲ. ಆಕೆಗೆ ಅದನ್ನು ವಿವರಿಸಲಾಗದಷ್ಟು ಮುಗ್ಧತೆ ಇದೆ. ಆತ, ತನ್ನ ಪಕ್ಕದಲ್ಲಿ ಬಂದು ಮಲಗುತ್ತಿದ್ದ. ತನ್ನನ್ನೂ ತಬ್ಬಿಕೊಳ್ಳುತ್ತಿದ್ದ ಎಂದು ಆಕೆ ನೀಡಿದ ಹೇಳಿಕೆಯ ಆಧಾರದ

ಮೇಲೆ ನ್ಯಾಯಾಲಯ ಆಕೆ ಎಷ್ಟು ಮುಗ್ಧಳಾಗಿದ್ದಾಳೆಂದು ಪರಿಗಣಿಸಿ. ಆಕೆಯ ಮೇಲೆ ಲೈಂಗಿಕ ಶೋಷಣೆ ನಡೆಯುತ್ತಾ ಬಂದಿರುವುದನ್ನು ಗುರುತಿಸಿದೆ. ಏಕಲವ್ಯ ಹಾಗೂ ಕನಸು ಸಂಸ್ಥೆಯನ್ನು ನಡೆಸುತ್ತಿದ್ದ ವಿಶ್ವ ಸಾಗರ್‌ನ ನಿಯಂತ್ರಣದಲ್ಲಿ ಪವಿತ್ರ ಇರುವುದನ್ನು ಗಮನಿಸಿದ ನ್ಯಾಯಾಲಯ ರಕ್ಷಣೆ ನೀಡಬೇಕಾದ ಸ್ವಯಂ ಸೇವಾ ಸಂಸ್ಥೆಯ ಜವಾಬ್ದಾರಿಯುತ ವ್ಯಕ್ತಿ, ಮುಗ್ಧ ಬಾಲಕಿಯನ್ನು ಹೀಗೆ ಬಳಸಿ ಕೊಂಡಿರುವುದು ಸಾಬೀತಾಗಿದೆ ಎಂಬುದನ್ನು ಒಪ್ಪಿಕೊಂಡಿದೆ. ಪವಿತ್ರಳನ್ನು ಕೌನ್ಸಿಲಿಂಗ್ ನೆಪದಲ್ಲಿ ವೀಡಿಯೋ ಚಿತ್ರೀಕರಿಸಿ, ತಮ್ಮ ಅನುಕೂಲಕ್ಕಾಗಿ ಸ್ವಯಂ ಸೇವಾ ಸಂಸ್ಥೆಗಳು ಬಳಸಿ ಕೊಳ್ಳುತ್ತಿರುವುದನ್ನು ಸಹ ಗಮನಿಸಿದೆ, ಆರೋಪಿಯು ಭಗವಾನ್ ರಜನೀಶ್‌ನ ಭಕ್ತನಾಗಿದ್ದು 'ಓಸೊ' ಸಿದ್ಧಾಂತದ ಅನುಯಾಯಿಯಾಗಿದ್ದು, ಆತ ಬಾಲಕಿಯರ ಮಧ್ಯ ನಗ್ನನಾಗಿ ಮಲಗುತ್ತಿದ್ದುದು ಸಹ ಸಾಕ್ಷ್ಯಾಧಾರ ಗಳ ಮೂಲಕ ಸಾಬೀತಾಗಿರುವುದರಿಂದ, ಐ.ಪಿ.ಸಿ. 376ರ ಪ್ರಕಾರ, 'ಕಸ್ಟೋಡಿಯಲ್ ರೇಪ್' ವ್ಯಾಪ್ತಿಗೆ ಬರುತ್ತದೆ.

ಅಪ್ರಾಯಕ ಮಕ್ಕಳಿಗೆ ಹಾಗೂ ಮಹಿಳೆಯರಿಗೆ ರಕ್ಷಣೆ ಕೊಡಬೇಕಾದ ಸಂಸ್ಥೆಗಳೇ ಅವರನ್ನು ಶೋಷಿಸುತ್ತಿದ್ದರೆ, ನ್ಯಾಯಾಲಯವು ಸೂಕ್ತ ಕ್ರಮತೆಗೆದು ಕೊಳ್ಳಬೇಕಾಗುತ್ತದೆ. ರಕ್ಷಣೆ ಕೊಡಬೇಕಾದ ಸಂಸ್ಥೆಗಳೇ ದಾರಿ ತಪ್ಪಿದಾಗ, ಸರಿಯಾದ ಕರ್ತವ್ಯವನ್ನು ನಿರ್ವಹಿಸದಿದ್ದಾಗ, ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಸ್ವಯಂಸೇವಾ ಸಂಸ್ಥೆಯ ಕಾರ್ಯಚಟುವಟಿಕೆಗಳನ್ನು ಪರಿಶೀಲಿಸಿದ ನ್ಯಾಯಾಲಯ ಆರೋಪಿಗೆ ಸೆಕ್ಷನ್ 376 ಪ್ರಕಾರ ಐದು ವರ್ಷ ಜೈಲು ಶಿಕ್ಷೆ ಹಾಗೂ ಮೂರು ಸಾವಿರ ದಂಡವನ್ನು ವಿಧಿಸಲಾಗಿದೆ.

ಬಹುಪಾಲು ಕೇಸುಗಳು ಬೆಳಕಿಗೆ ಬರದೇ ಇರುವ ಸಂದರ್ಭದಲ್ಲಿ ದೂರು ನೀಡಿ ಕೇಸು ದಾಖಲಾಗಿದ್ದರೂ, ಸಾಕ್ಷಿಗಳ ಕೊರತೆಯಿಂದ ಸೋತುಹೋಗುತ್ತಿರುವ ಹಿನ್ನಲೆಯಲ್ಲಿ ಪವಿತ್ರಾ ಕೇಸಿನಲ್ಲಿ ಆರೋಪಿಗೆ ಶಿಕ್ಷೆಯಾಗಿರುವುದು ಸ್ವಾಗತಾರ್ಹ. ಈ ಅಪರಾಧವನ್ನು 'ಸಾಮಾಜಕ್ಕೆ' ವಿರುದ್ಧ ವಾದ ಅಪರಾಧವೆಂದು ವ್ಯಾಖ್ಯಾನಿಸಿರುವುದು, ಮಹಿಳೆ ಸಮಾಜದ ಭಾಗ ಎಂದು ಮುಖ್ಯ ವಾಹಿನಿ ಪರಿಗಣಿಸಿರುವುದು ಸ್ವಾಗತಾರ್ಹ.

# ಸ್ತ್ರೀಯರಿಗನುಕೂಲವಾದ ಸಮಾಜಸೇವೆ

ಲೇಖಕಾ: ಶ್ರೀಮತಿ ಬಿ. ಇಂದಿರಮ್ಮ ನವರು, ಬಿ.ಎ., ಬೆಂಗಳೂರು

1928 ರಲ್ಲಿ ಪ್ರಕಟವಾದ ಒಕ್ಕಲಿಗರ ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿ ಶ್ರೀಮತಿ ಬಿ. ಇಂದಿರಮ್ಮ ರವರ 'ಸ್ತ್ರೀಯರಿಗನುಕೂಲವಾದ ಸಮಾಜಸೇವೆ' ಪ್ರಕಟವಾದ ಈ ಲೇಖನ ನಾವು ನಡೆದುಬಂದ ಹಾದಿಯ ಒಂದು ಮೆಟ್ಟಿಲು. ನಾಲ್ಕು ಗೋಡೆಯ ಮಧ್ಯ ಕಮರಿ ಹೋಗುವ ಮಹಿಳೆಯರ ವ್ಯಕ್ತಿತ್ವಕ್ಕೆ ಆ ಸಂದರ್ಭದಲ್ಲಿಯೆ ಇಂದಿರಮ್ಮ ಹೊಸ ಬೆಳಕಿನ ದಾರಿಗಳನ್ನು ತೋರಿಸುವ ಪ್ರಯತ್ನ ಮಾಡಿದ್ದಾರೆ. ಈ ಲೇಖನದಲ್ಲಿ ಮಿತಿಗಳಿದ್ದರೂ ಚಾರಿತ್ರಿಕವಾಗಿ ಮುಖ್ಯ ಎಂಬ ಕಾರಣಕ್ಕಾಗಿ ಈ ಲೇಖನವನ್ನು ಇಲ್ಲಿ ಮರು ಪ್ರಕಟಿಸಿದ್ದೇವೆ.

ಸಂ.ಮಂ.

ಭಾರತೋದ್ಧಾರವಾಗಬೇಕು, ಭಾರತೀಯರು ಏಳಿಗೆಗೆ ಬರಬೇಕು ಎಂದು ದೇಶಾಭಿಮಾನಿಗಳೆಲ್ಲರೂ ಅಭಿಪ್ರಾಯ ಪಡುವರು. ಆದರೆ ಇದು ಸಫಲವಾಗಬೇಕಾದರೆ ಸ್ತ್ರೀಯರೂ ಪುರುಷರೂ ಏಕೀಭವಿಸಿ ಕೆಲಸಮಾಡಬೇಕಾದುದು ಅವಶ್ಯಕ. ದೇಶೋದ್ಧಾರಕ್ಕೆ ಅನೇಕ ಮಾರ್ಗಗಳಿರುವುವು. ಅವುಗಳಲ್ಲಿ ಸಮಾಜ ಸೇವೆಯ ಮೂಲಕ ಉನ್ನತಿಯನ್ನು ಪಡೆವುದು ಇಂದು ಮುಖ್ಯ ಮಾರ್ಗವಾಗಿದೆ. ಪುರುಷರು ಈ ಸಮಾಜ ಸೇವಾ ಕಾರ್ಯದಲ್ಲಿ ನಿರತರಾಗಿ ಅನೇಕ ಸತ್ಕಾರ್ಯಗಳನ್ನು ಕೈಗೊಂಡು ಆಗಲೇ ಎಷ್ಟೋ ಉಪಕಾರಗಳನ್ನು ಮಾಡಿರುವರು. ಈ ಊರಿನ ಪೌರ ಸಾಮಾಜಿಕ ಸಂಘವು (Civic & Social Association) ಈ ಮಾರ್ಗದಲ್ಲಿ ನಡೆಸುತ್ತಿರುವ ಕೆಲಸವು ಎಲ್ಲರಿಗೂ ತಿಳಿದೇ ಇದೆ. ಸ್ತ್ರೀಯರು ಈ ವಿಷಯದಲ್ಲಿ ಇನ್ನೂ ಅಷ್ಟು ಮುಂದುವರಿದಿಲ್ಲ. ಮಾತೃ ಶಿಶು ರಕ್ಷಣಾ ಸಂಘವು (Maternity and Child Welfare Association) ಸ್ತ್ರೀಯರಿಗಾಗಿಯೇ ಸ್ಥಾಪಿತವಾಗಿ ಸ್ತ್ರೀಯರಿಂದ ನಡೆಸಲ್ಪಡುತ್ತಿದೆಯಾದರೂ ಬೆಂಗಳೂರಂಥಾ ಮಹಾ ಪಟ್ಟಣದಲ್ಲಿ ಈ ಸಂಘದ ಉದ್ದೇಶಗಳನ್ನು ನೆರವೇರಿಸುವುದಕ್ಕೆ ಸಿದ್ಧರಾಗಿ ಕೆಲಸ ಮಾಡುವ ಸ್ತ್ರೀಯರ ಸಂಖ್ಯೆಯು ಕಡಿಮೆಯಾಗಿರುವುದರಿಂದ ಸಂಘಕ್ಕೆ ಇನ್ನೂ ಹೆಚ್ಚಾಗಿ ದ್ರವ್ಯ ಸಹಾಯವಾಗುವುದಕ್ಕೂ, ಅದರ ಕೆಲಸವು ಮತ್ತಷ್ಟು ಉತ್ಸಾಹದಿಂದ ನಡೆಯುವುದಕ್ಕೂ ಅವಕಾಶವಿಲ್ಲವಾಗಿದೆ.

ಸ್ತ್ರೀಯರೂ ಪುರುಷರಂತೆ ಸಮಾಜ ಸೇವೆಯನ್ನು ಮಾಡಲು ಸಾಧ್ಯವೇ, ಸಾಧ್ಯವಾದ ಪಕ್ಷದಲ್ಲಿ ಯಾವರೀತಿ ಮಾಡಬಹುದೆಂಬ ವಿಷಯವನ್ನು ಸ್ವಲ್ಪ ಪರ್ಯಾಲೋಚಿಸೋಣ. ಸಾಧಾರಣವಾಗಿ ಸ್ತ್ರೀಯರಿಗೆ ಪ್ರಸವ ಕಾಲವು ಅಪಾಯ ಕಾಲವೆಂಬುವುದು

ಸರ್ವರಿಗೂ ತಿಳಿದಿದೆಯಷ್ಟೆ. ಈ ಕಾಲದಲ್ಲಿ ಸ್ವಲ್ಪ ಅಜಾಗರೂಕತೆಯಾದರೂ ಪ್ರಾಣಾಪಾಯವಾಗುವ ಸಂಭವವುಂಟು. ಇಂತಹ ಅಚಾತುರ್ಯಗಳನ್ನು ತಪ್ಪಿಸುವುದಕ್ಕೂ ಸ್ತ್ರೀಯರಿಗೆ ಈ ಸಂದರ್ಭಗಳಲ್ಲಿ ಅವಶ್ಯಕವಾದ ಸಲಹೆಗಳನ್ನು ಕೊಡುವುದಕ್ಕೂ ಹೆರಿಗೆ ಕೆಲಸದಲ್ಲಿ ನಿಪುಣೆಯರಾದ ಸ್ತ್ರೀಯರು ಬೇಕಾಗುತ್ತದೆ. ಇಂತಹ ತಿಳಿದ ಸ್ತ್ರೀಯರಿಂದ ಉಪಚರಿಸಲ್ಪಟ್ಟರೆ ಸುಖಪ್ರಸವವಾಗಿ ಬದುಕಿಕೊಳ್ಳುವ ಬಾಣಂತಿಯರ ಸಂಖ್ಯೆಯು ಹೆಚ್ಚುವುದು. ಇಲ್ಲವಾದರೆ ಅವರ ಮರಣ ಸಂಖ್ಯೆಯು ವೃದ್ಧಿಯಾಗುವುದು. ಇದೂ ಅಲ್ಲದೆ ಎಳೆಯ ಕೂಸುಗಳನ್ನು ಸಂರಕ್ಷಣೆ ಮಾಡುವ ಕ್ರಮವನ್ನೆಲ್ಲಾ ಅವರು ಚೆನ್ನಾಗಿ ತಿಳಿದುಕೊಂಡರೆ ಹುಟ್ಟಿದ ಮಕ್ಕಳು ಪ್ರಾಯಶಃ ಎಲ್ಲವೂ ಬದುಕಿಕೊಳ್ಳುತ್ತವೆ. ಇಲ್ಲವಾದರೆ ಬದುಕಿಕೊಳ್ಳುವ ಮಕ್ಕಳ ಸಂಖ್ಯೆಯು ಕಡಿಮೆಯಾಗಿ ಸಾಯುವ ಮಕ್ಕಳ ಸಂಖ್ಯೆಯು ಹೆಚ್ಚುವುದು ಮತ್ತು ಕಳೆದುಳಿದ ಮಕ್ಕಳು ರೋಗಾದಿಗಳಿಂದ ಪೀಡಿತರಾಗಿ ಬಹಳ ಕಷ್ಟಕ್ಕೆ ಗುರಿಯಾಗುವುವು.

"ಪೂರ್ವ ಕಾಲದಲ್ಲೆಲ್ಲಾ ಇಂಥಾ ಸ್ತ್ರೀಯರ ಅವಶ್ಯಕತೆಯೇ ಇದ್ದಿತೇ, ಆಗಿನ ಮಕ್ಕಳೂ ಬಾಣಂತಿಯರೂ ಸೌಖ್ಯವಾಗಿರುತ್ತಿರಲ್ಲಿಲ್ಲವೇ, ಹುಟ್ಟಿದ ಮಕ್ಕಳೆಲ್ಲಾ ಸತ್ತು ಹೋಗುತ್ತಿದ್ದುವೇ, ಅವಶ್ಯಕವಾದರೆ ಆಸ್ಪತ್ರೆಗೆ ಹೋದರಾಯಿತು, ಅಲ್ಲಿ ಚೆನ್ನಾಗಿ ನೋಡಿಕೊಳ್ಳುತ್ತಾರೆ. ಇಷ್ಟಕ್ಕಾಗಿ ಮನೆ ಬಾಗಿಲು ಬಿಟ್ಟು ಗಂಡಸಿನಂತೆ ಬೀದಿ ಬೀದಿ ತಿರುಗಿ ಬೋಧಿಸಲು ಹೋಗಬೇಕೇ ?" ಇವೇ ಮುಂತಾದ ಪ್ರಶ್ನೆಗಳನ್ನು ನಮ್ಮ ಸ್ತ್ರೀಯರಲ್ಲನೇಕರು ಕೇಳುವರು.

ಪೂರ್ವ ಕಾಲದ ಸ್ಥಿತಿಗತಿಗಳಿಗೂ ನಮ್ಮ ಕಾಲದವುಗಳಿಗೂ ವಿಶೇಷತಾರತಮ್ಯವಿರುವುದು. ಅದಕ್ಕನುಸಾರವಾಗಿ ನಮ್ಮ ದೇಹದಾರಾಢ್ಯದಲ್ಲಿ ಬದಲಾವಣೆಯೂ ಆಗಿರುವುದು, ಅಲ್ಲದೆ ಗರ್ಭಿಣಿಯರೆಲ್ಲರೂ ಆಸ್ಪತ್ರೆಗೆ ಹೋಗಲು ಅನುಕೂಲವಿರುವುದಿಲ್ಲ. ಪಟ್ಟಣಿಗರಿಗೆ ಆಸ್ಪತ್ರೆಯು ಅನುಕೂಲವಾಗಬಹುದು.

ಆದರೆ ಗ್ರಾಮವಾಸಿಗಳ ಪಾಡೇನು ? ಇವರಿಗೆ ಸಹಾಯಕರಾರು? ಈ ಬಡಹೆಂಗಸರ ಕಷ್ಟನಿವಾರಣೆಗಾಗಿಯೇ ಅನುಭವ-ಶಾಲಿನಿಯರಾದ ಸ್ತ್ರೀಯರ ಸಹಾಯವು ಬೇಕಾಗಿರುವುದು. ಪಟ್ಟಣಗಳಲ್ಲಿಯೂ ಕೂಡ ಈಗೀಗ ಆಸ್ಪತ್ರೆಗೆ ಹೋಗಲು ಸ್ತ್ರೀಯರು ಹಿಂದೆಗೆಯುತ್ತಾರೆ. ಏಕೆಂದರೆ, ವೈದ್ಯಶಾಸ್ತ್ರವನ್ನು ಅಭ್ಯಸಿಸುವ ವಿದ್ಯಾರ್ಥಿಗಳು ಕೆಲವು ಹೆರಿಗೆಗಳನ್ನು ಮಾಡಿಸಬೇಕೆಂಬ ನಿಯಮವಿರುವುದಂತೆ ! ಆದುದರಿಂದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಬೇಕೆಂಬ ಅಭಿಲಾಷೆಯುಳ್ಳ ವಿದ್ಯಾರ್ಥಿಗಳು ಹೆರಿಗೆ ಕಾರ್ಯಗಳನ್ನು ಮಾಡುವುದಕ್ಕೆ ಆತುರರಾಗಿರುವುದು ಸ್ವಭಾವವಾಗಿದೆ. ಇದಕ್ಕೆ ಗೃಹಸ್ಥರಾದ ಸ್ತ್ರೀಯರು ವಿಶೇಷ ಗಮನಕೊಟ್ಟು ತಮ್ಮ ದೇಶ ಭಗಿನಿಯರ ಕಷ್ಟಕಾಲದಲ್ಲಿ ಸಹಾಯಮಾಡಬೇಕಾದುದು ಆವಶ್ಯಕ. ಈ ನ್ಯೂನತೆಗಳನ್ನು ಚೆನ್ನಾಗಿ ವಿಮರ್ಶಿಸಿಯೇ ಪೂನಾ ಬೊಂಬಾಯಿ ಪಟ್ಟಣಗಳಲ್ಲಿ "ಮಹಿಳಾ ಸೇವಾಸದನ" ವೆಂಬ ಒಂದು ಸಂಘವನ್ನೇರ್ಪಡಿಸಿ, ಅದರಲ್ಲಿ ಹೆಂಗಸರು ವೈದ್ಯಶಾಸ್ತ್ರ ವನ್ನು ಕಲಿಯಲು ವಿಶೇಷ ಗಮನವನ್ನು ಕೊಡುತ್ತಿರುವರು. ಈ ಸದನದ ಉಪಶಾಖೆಗಳು ಬೊಂಬಾಯಿ ಆಧಿಪತ್ಯದ ಮುಖ್ಯ ಪಟ್ಟಣಗಳಲ್ಲೆಲ್ಲಾ ಸ್ಥಾಪಿತವಾಗಿರುವುವು. ಮೇಲ್ಕಂಡಂತಲ್ಲದೆ ಚಿತ್ರಪಟ (Slides) ಗಳ ಮೂಲಕವೂ, ವಿಷಯಗಳನ್ನು ಪ್ರತ್ಯಕ್ಷವಾಗಿ (Practical Demonstrations) ತೋರಿಸುವುದರ ಮೂಲಕವೂ ಸ್ತ್ರೀಯರಿಗೆ ಆವಶ್ಯಕವಾದ ವಿಷಯಗಳನ್ನು ಸ್ತ್ರೀಯರೇ ಬೋಧಿಸಬಹುದು.

ಅಜ್ಞಾನಾಂಧಕಾರವನ್ನೂ, ಮೂರ್ಖತನವನ್ನೂ ಹೋಗಲಾಡಿಸು-ವುದಕ್ಕೆ ವಿದ್ಯೆಯು ಆವಶ್ಯಕವೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಇಷ್ಟು ಮುಖ್ಯವಾದ ವಿದ್ಯೆಯನ್ನು ತಮ್ಮ ಸಹೋದರಿಯರಿಗೆ ದಾನಮಾಡಿ ಅವರನ್ನೂ ತಮ್ಮ ಹಾಗೆಯೇ ವಿದ್ಯಾವಂತೆಯರನ್ನಾಗಿ ಮಾಡುವುದು ವಿದ್ಯಾವತಿಯರ ಕರ್ತವ್ಯವಾಗಿದೆ. ಬಾಲಕಿಯರ ವಿದ್ಯಾಭ್ಯಾಸಕ್ಕಾಗಿ ಮೈಸೂರು ಸಂಸ್ಥಾನದ ಹಳ್ಳಿಪಳ್ಳಿಗಳಲ್ಲಿಯೂ ಪಾಠಶಾಲೆಗಳೇರ್ಪಟ್ಟಿವೆ. ಆದರೆ ಪಾಠಶಾಲೆಗಳಿಗೆ ಹೋಗಲು ಅನುಕೂಲವಿಲ್ಲದ ಸ್ತ್ರೀಯರ ಶಿಕ್ಷಣಕ್ಕೆ ಯಾವ ವಿಧವಾದ ಏರ್ಪಾಡೂ ಇಲ್ಲ. ಆದುದರಿಂದ ಇಂಥವರಿಗೆ ಅವರ ಗೃಹಗಳಲ್ಲಿಯೇ ಉಚಿತ ವಿದ್ಯಾಭ್ಯಾಸ (Home Education ) ಮಾಡಿಸುವುದಕ್ಕಾಗಲೀ, ರಾತ್ರಿ ಪಾಠಶಾಲೆಗಳಲ್ಲಿ ನಡೆಯುವಂತೆ ಸ್ತ್ರೀಯರಿಗೇ ಒಂದು ಸ್ಥಳವನ್ನೇರ್ಪಡಿಸಿಕೊಂಡು ಹಗಲುಹೊತ್ತಿನಲ್ಲಿ ಪಾಠ ಹೇಳಿಕೊಡುವುದಕ್ಕಾಗಲೀ ತಕ್ಕ ವಸತಿಗಳನ್ನು ಸ್ತ್ರೀಯರೇ ಕಲ್ಪಿಸಬಹುದು. ಈ ತರಹ ಆನುಕೂಲಗಳು ಪಟ್ಟಣಗಳಿ-ಗಿಂತಲೂ ಹಳ್ಳಿಗಳಲ್ಲಿ ಅತ್ಯಾವಶ್ಯಕವಾಗಿರುವುವು. ಕಾರಣಾಂತರದಿಂದ ಹಗಲುವೇಳೆ ಕೆಲಸಕ್ಕೆ ಹೋಗಬೇಕಾದ ಸ್ತ್ರೀಯರಿಗೆ ರಾತ್ರಿವೇಳೆಯಲ್ಲಿ ವಿದ್ಯೆಯನ್ನು ಕಲಿಸಲು ಪ್ರತ್ಯೇಕವಾಗಿ ರಾತ್ರಿ ಪಾಠಶಾಲೆಗಳನ್ನೂ ವಿದ್ಯಾವತಿಯರಾದ ಸ್ತ್ರೀಯರು ಪ್ರಾರಂಭಿಸಿ ನಡೆಸಬಹುದು.

"ನಡೆಯುವ ಕಾಲು ಎಡವದೆ ಇರದು" ಎಂಬಂತೆ ಮಾನವ ಕೋಟಿಯಲ್ಲಿ ಮಾರ್ಗತಪ್ಪಿ ನಡೆಯುವವರು ಇಲ್ಲದೆ ಇಲ್ಲ.

ಇಂಥವರನ್ನು ನಮ್ಮಲ್ಲಿ ಗುಂಪಿಗೆ ಸೇರಿಸದೆ ಬಹುಹೀನವಾಗಿ ಕಾಣುವುದುಂಟು. ಅವರ ದರ್ಶನ ಸಂಭಾಷಣಗಳೂ ನಿಂದನೀಯಗಳೆಂದೇ ಭಾವಿಸಲ್ಪಟ್ಟವೆ. ಆಶೆಗೊಳಗಾಗಿಯಾಗ - ಲೀ, ಸಹವಾಸದೋಷದಿಂದಾಗಲೀ ಅಥವಾ ಸರಿಯಾದ ಶಿಕ್ಷಣವಿಲ್ಲದುದರಿಂದಾಗಲೀ ಜನರು ದಾರಿ ತಪ್ಪಿ ನಡೆಯಬಹುದು. ತಿಳಿದೋ ಅಥವಾ ತಿಳಿಯದೋ ಅಥವಾ ಬುದ್ಧಿ ಮೋಸಹೋಗಿಯೋ ತಪ್ಪು ಮಾರ್ಗಕ್ಕೆ ಬಿದ್ದರೆ ಅವರನ್ನು ಯಾವಜ್ಜೀವವೂ ನಿಕೃಷ್ಟವಾಗಿ ಕಂಡು ತಿರಸ್ಕರಿಸುವುದು ಅನುಚಿತವಾದುದು. ಅವರಲ್ಲಿಯೂ ಗುಣಗಳಿರಬಹುದು. ಅಂಥವರನ್ನು ನಿರಾಕರಿಸುವುದರಿಂದ ಅವರಿಗೆ ಉತ್ಸಾಹವು ಕುಗ್ಗಿ ಯಾವ ಕೆಲಸವನ್ನು ಮಾಡುವುದಕ್ಕೂ ಮುಂದು ತೋರದೆ ಹೋಗಬಹುದು. ಅವರಿಂದ ದೇಶಕ್ಕೆ ಏನಾದರೂ ಒಂದು ಪ್ರಯೋಜನವಾಗುವಹಾಗಿದ್ದರೆ ಅದಕ್ಕೂ ನಾವು ಅಡ್ಡಿ ಮಾಡಿದಂತಾಗುತ್ತದೆ. ಇಲ್ಲವೇ ತಮ್ಮನ್ನು ಅಲ್ಲಗಳೆಯುವರೆಂದು ತಿಳಿದು ಅವರು ಹಿಂದು ಮುಂದಾಲೋಚನೆಯಿಲ್ಲದೆ ದುರ್ಮಾರ್ಗವನ್ನೇ ಮುಂದಕ್ಕೂ ಅವಲಂಬಿಸಲು ನಾವು ಮಾರ್ಗ ಮಾಡಿಕೊಟ್ಟಂತಾಗುತ್ತದೆ. ಆದುದರಿಂದ ಅವರಿಗೆ ಸರಿಯಾದ ಶಿಕ್ಷಣವನ್ನು ಕೊಟ್ಟು ತಪ್ಪು ಮಾರ್ಗದಿಂದ ತಿರುಗಿಸಿ ಸ್ನೇಹಭಾವದಿಂದ ಕಾಣುತ್ತಾ ಅವರಿಗೆ ಸ್ವತಂತ್ರ ಜೀವನವಾಗುವಂತೆ ಅವಕಾಶವನ್ನು ಕಲ್ಪಿಸಿಕೊಡಬೇಕಾದುದು ನಮ್ಮ ಕರ್ತವ್ಯವಾಗಿರುವುದು. ಕಳೆದ ವರ್ಷ ನಮ್ಮ ದಿವಾನ್‌ಸಾಹೇಬರವರ ಅಧ್ಯಕ್ಷತೆಯಲ್ಲಿ ಬಂದೀಖಾನೆಯಿಂದ ಬಿಡುಗಡೆಯಾದವರ ಸಹಾಯಕ ಸಂಘವೊಂದು (Released Prisoners Aid Association ) ಸ್ಥಾಪಿತವಾಯಿತು. ಅದರ ಉದ್ದೇಶವು ಬಂದೀಖಾನೆಯಿಂದ ಬಿಡುಗಡೆಯಾದವರಿಗೆ ಜೀವನೋಪಾಯವನ್ನು ಕಲ್ಪಿಸಿಕೊಡುವುದಲ್ಲದೆ ಹಾದಿ ತಪ್ಪಿದವರನ್ನು ಹಾದಿಗೆ ತರುವುದೂ ಆಗಿರುವುದು. ತಪ್ಪು ಮಾಡಿದವರನ್ನು ಶಿಕ್ಷಿಸುವುದು ಸುಲಭ. ಆದರೆ ಅವರನ್ನು ಮನ್ನಿಸುವಂಥಾ ದೊಡ್ಡ ಗುಣವನ್ನು ಪಡೆಯುವುದು ಬಹಳ ಕಷ್ಟ. ಕೆಟ್ಟವರೊಡನೆ ಸೇರಿದರೆ ನಾವೂ ಕೆಟ್ಟು ಹೋಗುತ್ತೇವೆಂಬ ಅಭಿಪ್ರಾಯವನ್ನು ನಾವು ತ್ಯಜಿಸಬೇಕು. “ಕೆಸರಿನೊಡಗೂಡಿದ್ದರೂ ಕಮಲಕ್ಕೆ ಎಲ್ಲೆಲ್ಲಿಯೂ ಮಾನ್ಯವು ದೊರೆಯುತ್ತದೆ.” ಅದರಂತೆಯೇ ಕೆಟ್ಟವರೊಡನೆ ಸೇರಿದ ಮಾತ್ರಕ್ಕೆ ಯಾರೂ ಕೆಡಲಾರರು. ಕೆಟ್ಟವರೊಡನೆ ಸೇರಿದರೂ ತಮ್ಮ ಯೋಗ್ಯತೆಗೆ ಕುಂದು ತಂದುಕೊಳ್ಳದೆ ಅವರನ್ನೂ ಒಳ್ಳೆಯ ಮಾರ್ಗಕ್ಕೆ ಎಳೆಯಲು ಪ್ರಯತ್ನಿಸುವುದೇ ದೊಡ್ಡ ಗುಣವಾಗಿರುತ್ತದೆ. ಆದುದರಿಂದ ಮಾರ್ಗ ತಪ್ಪಿದ ನಮ್ಮ ಭಗಿನಿಯರನ್ನು ಮಾರ್ಗಕ್ಕೆ ತರಲು ನಮ್ಮ ಸ್ತ್ರೀಯರು ಮನಸ್ಸು ಮಾಡಬೇಕು. ಮದ್ರಾಸಿನಲ್ಲಿ ಯಾಮಿನೀಪೂರ್ಣತಿಲಕಮ್ಮ ನೆಂಬುವರು “ಯುವತೀಜನ ಶರಣಾಲಯ” ಎಂಬ ಒಂದು ಸಮಾಜವನ್ನು ಸ್ಥಾಪಿಸಿ ವೇಶ್ಯಾಂಗನೆಯರು ಇನ್ನುಮೇಲೆ ವಿದ್ಯಾವತಿಯರಾಗಿ ಗೃಹಿಣಿಯರಾಗಿರಬೇಕೆಂಬ ಒಂದು ನಿಬಂಧನೆಯನ್ನು ಮಾಡಿರುವರು. ಇದು ನಿಜವಾಗಿಯೂ ಶ್ಲಾಘನೀಯವಾದ ವಿಷಯವಾಗಿದೆ.

ಇಷ್ಟು ಮಾತ್ರವಲ್ಲದೆ ಸ್ತ್ರೀಯರು 8-10 ದಿನಗಳಿಗೊಮ್ಮೆಯಾದರೂ ಸ್ತ್ರೀ ಕೈದಿಗಳ ಬಳಿಗೆ ಹೋಗಿ ಅವರ ಯೋಗ ಕ್ಷೇಮವನ್ನು ವಿಚಾರಿಸಿ ಅವರಿಗೆ ದೇವರಲ್ಲಿ ಭಕ್ತಿ ಯುಂಟಾಗುವಂತೆಯೂ ಅವರು ತಮ್ಮ ಪಾಪಗಳಿಗಾಗಿ ಪಶ್ಚಾತ್ತಾಪ ಪಡುವಂತೆಯೂ ನೀತಿಯುಕ್ತವಾದ ಮಾತುಗಳನ್ನು ಹೇಳಬಹುದು. ನಮ್ಮ ಊರಿನಲ್ಲಿ ಒಬ್ಬಿಬ್ಬರು ಸ್ತ್ರೀಯರು ಈ ಉತ್ತಮ ಕೆಲಸವನ್ನು ಶ್ರದ್ಧೆಯಿಂದ ಈಗಲೂ ನಡೆಸುತ್ತಿರುವರೆಂದು ತಿಳಿಸಲು ಸಂತೋಷವಾಗುತ್ತದೆ. ಇವರ ಮೇಲ್ಪಂಕ್ತಿಯನ್ನೇ ಇತರ ನಮ್ಮ ಸಹೋದರಿಯರೂ ಅನುಸರಿಸುವುದೊಳ್ಳೆಯದು.

ನಮ್ಮ ದೇಶದಲ್ಲಿ ಅನೇಕ ಸಂಸಾರಗಳು ದಾರಿದ್ರ್ಯ ದೇವತೆಯ ದೆಶೆಯಿಂದ ನರಳುತ್ತಿರುವುವು. ಅವುಗಳನ್ನು ಸಾಧ್ಯವಾದ ಮಟ್ಟಿಗೂ ಉದ್ಧಾರಮಾಡಲು ನಾವು ಪ್ರಯತ್ನ ಪಡಬೇಕು. ನೂಲುವುದು, ನೇಯುವುದು, ಸ್ವದೇಶದಲ್ಲಿ ತಯಾರಿಸಿದ ಬಟ್ಟೆಗಳನ್ನು ಧರಿಸುವುದು ಈ ಸುಲಭೋಪಾಯಗಳಿಂದ ದಾರಿದ್ರ್ಯವನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆಮಾಡಬಹುದೆಂದು ಮಹಾತ್ಮ ಗಾಂಧಿಯವರು ಅಪ್ಪಣೆ ಕೊಡಿಸಿರುತ್ತಾರೆ. ಈ ವಿಷಯವನ್ನು ಕಳೆದ ಜುಲೈ ತಿಂಗಳು ದೇಶೀಯ ಪಾಠಶಾಲೆಯಲ್ಲಿ ನಡೆದ ಖಾದಿ ಪ್ರದರ್ಶನದಲ್ಲಿ ವಿಶದವಾಗಿ ಪ್ರಕಟಿಸಿದ್ದರು. ಅಲ್ಲಿಗೆ ದಯಮಾಡಿಸಿದ್ದವರಲ್ಲನೇಕರಿಗೆ ಇದರ ನಿಜಾಂಶವು ಮನಗಂಡಿರಬಹುದು. ಹೀಗಿರುವಲ್ಲಿ ನೂಲುವುದು, ನೇಯುವುದು ಇವುಗಳನ್ನು ಕುಲಕಸುಬಾಗಿ ಆಚರಿಸತಕ್ಕ ಸ್ತ್ರೀಯರಲ್ಲದೆ ಮಿಕ್ಕವರೂ ತಮ್ಮ ವಿರಾಮಕಾಲಗಳಲ್ಲಿ ಕಲಿಯುವುದರಿಂದ ಎಷ್ಟೋ ಪ್ರಯೋಜನವಿರುತ್ತದೆ. ಪೂರ್ವಕಾಲದಲ್ಲಿ ನೂಲುವುದು ಸ್ತ್ರೀಯರ ಮುಖ್ಯ ಮನೆಗೆಲಸವಾಗಿದ್ದಿತು. ಅಂಥಾದ್ದನ್ನು ಈಗ ನಾವು ಮೂಲೆಗೊತ್ತರಿಸುವುದು ಸರಿಯಲ್ಲ. ಪುರಾಣ ಶ್ರವಣ ಕಾಲಗಳಲ್ಲಿ ನಮ್ಮ ದೇಶದ ಸ್ತ್ರೀಯರು ಹತ್ತಿ ಬಿಡಿಸುವುದು, ಹೂಬತ್ತಿ ಮಾಡುವುದು, ಟೋಪಿ ಹೆಣೆಯುವುದು ಈ ಕೆಲಸಗಳನ್ನು ಮಾಡುವುದುಂಟು. ಅದರ ಜತೆಗೆ ರಾಟೆಯಿಂದ ದಾರ ತೆಗೆಯುವುದನ್ನೂ ಕೂಡ ವಾಡಿಕೆಗೆ ತರಬಹುದು.

ಮೈಸೂರು ವಿಧವಾಲಯದಲ್ಲಿ (Widows' Home) ನೇಯುವುದನ್ನು ಹೇಳಿಕೊಡುತ್ತಿದ್ದಾರೆ. ಅದರ ಸಂಗಡ ಹತ್ತಿ ಎಕ್ಕುವುದನ್ನೂ, ರಾಟೆಯಿಂದ ನೂಲು ತಗೆಯುವುದನ್ನೂ ಹೇಳಿಕೊಟ್ಟು ಆ ಸ್ಥಳವನ್ನೇ ಸ್ವದೇಶವಸ್ತ್ರ ಕಾರ್ಯಾಲಯದಂತೆ ಪರಿವರ್ತನೆ ಮಾಡಬಹುದು. ಹೀಗೆ ಮಾಡುವುದರಿಂದ ಬಡ ವಿಧವೆಯರಿಗೂ ಅಲ್ಲಿ ಕೆಲಸಮಾಡುವ ಇತರ ಸ್ತ್ರೀಯರಿಗೂ ಜೀವನೋಪಾಯವನ್ನು ಕಲ್ಪಿಸಿಕೊಟ್ಟಂತಾಗುತ್ತದೆ. ಅಲ್ಲದೆ, ಅಭಿಮಾನಕಾಲಿಗಳಾದವರಿಂದ ವಸ್ತ್ರ ವಿಕ್ರಯವೂ ಹೇರಳವಾಗಿ ಆಗಬಹುದು.

ಹಳ್ಳಿಗಳಲ್ಲಿ ರೈತ ಹೆಂಗಸರಿಗೆ ಮಳೆಗಾಲ, ಸುಗ್ಗಿಯ ಕಾಲಗಳಲ್ಲಿ ವಿನಹ ಉಳಿದ ಕಾಲಗಳಲ್ಲಿ ಹೆಚ್ಚು ವಿರಾಮವಿರುವುದೆಂದು ತಿಳಿಯಬರುತ್ತದೆ. ಆ ಸಮಯದಲ್ಲಿ, ಅವರು ನೂಲುವುದು, ನೇಯುವುದು ಇವುಗಳಿಂದ ತಮ್ಮ ಸಂಸಾರಕ್ಕೆ ಬೇಕಾದಷ್ಟು ಬಟ್ಟೆಗಳನ್ನು ಒದಗಿಸಿಕೊಳ್ಳಬಹುದು. ನೀಲಗಿರಿಯಲ್ಲಿರುವ ತೊದವರು ಸ್ವಹಸ್ತದಿಂದ ತಯಾರಿಸಿದ ಬಟ್ಟೆಗಳನ್ನಲ್ಲದೆ ಬೇರೆ ಬಟ್ಟೆಗಳನ್ನು ಧರಿಸುವುದಿಲ್ಲವಂತೆ ! ಅವರು ನಮಗಿಂತಲೂ ನಾಗರಿಕತೆಯಲ್ಲಿ ಹಿಂದುಳಿದವರಾದರೂ ಈ ವಿಷಯದಲ್ಲಿ ನಾವು ಅವರಿಂದ ಪಾಠಕಲಿತುಕೊಳ್ಳಬೇಕಾಗಿದೆ. ಆದುದರಿಂದ ಹಳ್ಳಿಗಳಲ್ಲಿಯೂ, ಪಟ್ಟಣಗಳಲ್ಲಿಯೂ ನೂಲುವ ಮತ್ತು ನೇಯುವ ಕೆಲಸಗಳಿಗೆ ಸ್ತ್ರೀಯರು ಗಮನಕೊಡುವಂತೆ ಪದೇ ಪದೇ ಬೋಧನೆಮಾಡಲು ಪುರುಷರಂತೆ ಸ್ತ್ರೀಯರೂ ಒಂದು ಸಂಘವನ್ನು ಸ್ಥಾಪಿಸಿಕೊಂಡು ಕೆಲಸಮಾಡುವುದು ಅತ್ಯಾವಶ್ಯಕ.

ಹೀಗೆ ಜನಸೇವೆ ಮಾಡಲು ಸ್ತ್ರೀಯರಿಗೆ ಅನೇಕ ಮಾರ್ಗಗಳಿವೆ. ಇದಕ್ಕೆ ಬೇಕಾದ ಉತ್ತೇಜನವು ದೊರಕಿದುದೇ ಆದರೆ ಅವರು ದೇಶೋದ್ಧಾರ ಕಾರ್ಯದಲ್ಲಿ ಪುರುಷರಿಗೆ ಒತ್ತಾಸೆಯಾಗುವುದರಲ್ಲಿ ಸಂಶಯವಿರುವುದಿಲ್ಲ. ದೊಡ್ಡವರ ಮೇಲ್ಪಂಕ್ತಿಯನ್ನು ಚಿಕ್ಕವರು ಹೇಗೆ ಅನುಸರಿಸುವರೋ ಅದರಂತೆ ಧನಸಂಪತ್ತಿಯುಳ್ಳವರೂ, ಪದವೀಧರರೂ ಈ ವಿಧವಾದ ಕಾರ್ಯವನ್ನು ಕೈಗೊಳ್ಳಲು ಮುಂದುವರಿದರೆ ಇತರರೂ ಅವರನ್ನು ಕೂಡಲೆ ಹಿಂಬಾಲಿಸುವರು. ತಾವಾಗಿಯೇ ಪ್ರಯತ್ನಿಸಲು ಅವರಿಗೆ ಬೆಂಬಲ ಸಾಲದು. ಆದುದರಿಂದ ಕಾಲಾನುಕೂಲವೂ ದ್ರವ್ಯಾನುಕೂಲವೂ ಇರುವ ಭಗಿನಿಯರು ಈ ಶ್ರೇಷ್ಠವಾದ ಕಾರ್ಯದ ಕಡೆ ವಿಶೇಷ ಲಕ್ಷ್ಯ ಕೊಡುವರೆಂದು ನಿರೀಕ್ಷಿಸಲ್ಪಟ್ಟಿದೆ. ಇದರಿಂದ ತಮ್ಮ ಕಾಲವೂ ದ್ರವ್ಯವೂ ಸದ್ವಿನಿಯೋಗವಾಗುವುವಲ್ಲದೆ ಇವರು ಸಮಾಜದ ಏಳಿಗೆಗೂ ದೇಶದ ಏಳಿಗೆಗೂ ಸಹಾಯ ಮಾಡಿದಂತಾಗುತ್ತದೆ.

ಸೌಜನ್ಯ. ಪ್ರೊ.ಎಂ.ಎಚ್. ಕೃಷ್ಣಯ್ಯ

# 'ಬೇಟೆ' ನೃತ್ಯನಾಟಕದತ್ತ ಒಂದು ವಿಮರ್ಶಾತ್ಮಕ ನೋಟ

ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳ ಜಾತ್ರೆಯ ನಡುವೆ ಕಾಡು ಬರಿದಾಗುತ್ತಿದೆ, ನಾಡು ಬರಡಾಗುತ್ತಿದೆ, ಮನಸ್ಸು ಕೊರಡಾಗುತ್ತಿದೆ. ಸಾಮಾಜಿಕ ಹಿತಾಸಕ್ತಿಗಳು ಗೌಣವಾಗಿ ವೈಯಕ್ತಿಕ ಹಿತಾಸಕ್ತಿ ಎಲ್ಲೆಡೆ ನರ್ತನಗೈಯುತ್ತಿವೆ. ಅಲ್ಪಸಂಖ್ಯಾತರ ಬುದ್ಧಿವಂತಿಕೆಯ ಸೆರಗಿನಲ್ಲಿ ಬಹುಸಂಖ್ಯಾತ ಅಮಾಯಕರ ಬದುಕು ನಲುಗಿಹೋಗುತ್ತಿದೆ. ಇಂಥೆಲ್ಲಾ ವಿಪರ್ಯಾಸಗಳ ನಡುವೆಯೂ ಬದುಕು ಚಿಗುರುವ ಸಹಜ ಆಶ್ಚರ್ಯಗಳನ್ನು ಅಲ್ಲಲ್ಲೆ ಕಾಣುತ್ತಿರುತ್ತೇವೆ. ಇದೇ ಪ್ರಕೃತಿ ನಿಯಮವೆಂದು ಒಪ್ಪಿ ತೆಪ್ಪಗಾಗಿ ಬಿಡುತ್ತೇವೆ. ನಮ್ಮ ನಮ್ಮ ಸುಖದ ಹಾದಿಗಳನ್ನು ಹುಡುಕುತ್ತಾ ಹೊರಟು ಬಿಡುತ್ತೇವೆ. ಆದರೆ ಎಲ್ಲೋ ಒಂದೊಂದು ಹ್ಯಾಂಡ್‌ಪೋಸ್ಟ್‌ಗಳು ಧುತ್ತೆಂದು ಎದುರಾಗುತ್ತವೆ. ಗೊತ್ತುಗುರಿಯಿಲ್ಲದೆ ಎತ್ತೆತ್ತಲೋ ಸಾಗುತ್ತಿರುವ ನಮ್ಮ ಸಮುದಾಯದ ಬದುಕಿಗೊಂದು ಸರಿಯಾದ ಮಾರ್ಗಕಂಡುಕೊಳ್ಳುವ ಅವಕಾಶ ಕಲ್ಪಿಸಿಕೊಡುತ್ತವೆ. ಇಂಥ ಮಾರ್ಗದರ್ಶನ ಮಾಧ್ಯಮಗಳಾಗಿ ಮಾನವ ಬದುಕಿನೊಂದಿಗೆ ಬೆಳೆದು ಬಂದಿರುವ ಶಿಲ್ಪಕಲೆ, ಚಿತ್ರಕಲೆ, ಸಾಹಿತ್ಯ, ನೃತ್ಯ ಮೊದಲಾದವು ಮಹತ್ವದ ಕಾರ್ಯನಿರ್ವಹಿಸಿವೆ. ಇವುಗಳಲ್ಲಿ ನಾಟಕ ಮತ್ತು ನೃತ್ಯ ಮಾಧ್ಯಮಗಳಿಗೆ, ಶ್ರವ್ಯ ಮಾಧ್ಯಮಗಳಿಗೆ ಸಿಕ್ಕ ಆದರ ದಕ್ಕುವಲ್ಲಿ ವಿಳಂಬವಾಯಿತು. ಕಾರಣ ದೃಶ್ಯಮಾಧ್ಯಮಗಳ ಆಂಗಿಕ ಹಾವಭಾವಗಳು ಸಂಸ್ಕಾರರಹಿತ ನೋಡುಗನಲ್ಲಿ ಸುಕೃತಿಗಿಂತ ವಿಕೃತಿ ಮೂಡಿಸುವ ಸಾಧ್ಯತೆ ಹೆಚ್ಚಾಗಿದೆ ಎಂದು ಭಾವಿಸಿದ್ದು. ಅಲ್ಲದೆ ನೃತ್ಯ ಉಳ್ಳವರ ಭೋಗ ಜೀವನದ ದ್ಯೋತಕವಾಗಿ ಬಹುಕಾಲ ವಿಜೃಂಭಿಸಿದ್ದು. ಝುಗಝುಗಿಸುವ ಬೆಳಕಿನಡಿ ಮನಸ್ಸಂತೋಷಪಡಿಸಿದ ನೃತ್ಯಗಾತಿಯೇ ಕತ್ತಲ ಖಾಸಗಿಕೋಣೆಯಲ್ಲಿ ಮೈತಣಿಸಬೇಕಾದ ಅನಿವಾರ್ಯವಿತ್ತು. ಹೀಗಾಗಿ ಕುಲೀನರು ನಾಟಕ ಮತ್ತು ನೃತ್ಯಗಳಿಂದ ದೂರ ಸರಿದಿದ್ದಿರಬೇಕು. ಕಾಲಕ್ರಮೇಣ ದೃಶ್ಯಮಾಧ್ಯಮಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳು ಬದಲಾವಣೆಗೆ ಪಕ್ಕಾಗಿ ಜನಮನ್ನಣೆಗಳಿಸಿವೆ. ಸಮುದಾಯದ ಒಳಿತಿಗಾಗಿ ಶ್ರಮಿಸುವ ಮಾಧ್ಯಮಗಳಾಗಿ ಮಾರ್ಪಟ್ಟಿವೆ.

ಈ ನೆಲೆಗಟ್ಟಿನಲ್ಲಿ ನಾವು ಕಂಡ ನೃತ್ಯನಾಟಕವೇ ಬೇಟೆ. ಅಪರ್ಣಸಿಂಧೂರ್ ಅವರು ನಿರ್ದೇಶಿಸಿ ಪ್ರಸ್ತುತ ಪಡಿಸಿದ ಈ ನೃತ್ಯನಾಟಕ ಜ್ಞಾನಪೀಠ ಪ್ರಶಸ್ತಿ ವಿಜೇತೆ ಬಂಗಾಲಿ ಲೇಖಕಿ ಮಹಾಶ್ವೇತಾದೇವಿ ಅವರ ಕಥೆ ಆಧರಿತ.

ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ದುರಂತ ವಸ್ತುವಿಷಯವನ್ನು ತಂದರೂ ಅದು ಸುಖಾಂತವಾಗಿಯೇ ಇರಬೇಕು. ಕೃತಿಯೊಂದು ಮಹಾಕಾವ್ಯ ಎಂಬ ಹೆಗ್ಗಳಿಕೆ ಗಳಿಸಬೇಕಾದರೆ ಅಷ್ಟಾದಶವರ್ಣನೆಗಳು ಅನಿವಾರ್ಯವಾಗಿತ್ತು.. ಇವು ಪ್ರಸ್ತುತವೋ ಅಪ್ರಸ್ತುತವೋ ಎಂಬ ಪ್ರಶ್ನೆಯೇ ಅಪ್ರಸ್ತುತವಾಗಿತ್ತು. ಇನ್ನು ದೃಶ್ಯಮಾಧ್ಯಮಗಳಲ್ಲಿ ದುಃಖಾಂತ ನಿಷಿದ್ಧ, ಅದರಲ್ಲೂ ನೃತ್ಯವೆಂದರೆ ಮನೋರಂಜನೆಯೇ ಅದರ ಮುಖ್ಯ ಗುರಿ. ಸಾಹಿತ್ಯ ಕ್ಷೇತ್ರದಲ್ಲಿನ ನಿಷಿದ್ಧಗಳನ್ನು ಮೀರಿ ಸಾಮಾಜಿಕ ವಸ್ತು ವಿಷಯವನ್ನೊಳಗೊಂಡ ಕೃತಿಗಳಿಗಾಗಿ ಹತ್ತೊಂಬತ್ತನೆ ಶತಮಾನದವರೆಗೂ ಕಾಯಬೇಕಾಯಿತು. ಈ ದಿಕ್ಕಿನಲ್ಲಿ ಕೈಲಾಸಂರವರು ವಿಡಂಬನೆಯ ಮೂಲಕ ಬದುಕಿನ ಕಟುಸತ್ಯಗಳನ್ನು ಅನಾವರಣಗೊಳಿಸಿ, ಬಂಡಾಯ ಧೋರಣೆಯನ್ನು ಬಿತ್ತಿದ ಹಾಗೆ ಶಾಸ್ತ್ರೀಯ ನೃತ್ಯದಲ್ಲಿನ ಸಂಪ್ರದಾಯಗಳನ್ನು ಮೀರಿ ಸ್ವಂತಿಕೆಯಿಂದ ಹೊಸದೊಂದು ಹೆಜ್ಜೆ ಮೂಡಿಸುವ ಪ್ರಯತ್ನದಲ್ಲಿರುವವರು. ಅಪರ್ಣಾ ಸಿಂಧೂರ್, ಭಾರತೀಯ ಬದುಕಿನ ಬಹುಮುಖೀ ಸಂಸ್ಕೃತಿಯನ್ನು ನಾಟ್ಯರಂಗದಲ್ಲೂ ಬಿಂಬಿಸುವ ಈ ವಿನೂತನ ಪ್ರಯತ್ನವನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ. ಪೌರಾಣಿಕ ವಸ್ತುಪರಿಧಿಯಲ್ಲೇ ಸುತ್ತುತ್ತಿದ್ದ ನಾಟ್ಯಶಾಸ್ತ್ರಕ್ಕೆ ಸಾಮಾಜಿಕ ವಸ್ತುವಿಷಯಗಳ ಹೊಸ ಆಯಾಮ ನೀಡಿದ್ದಾರೆ. ಹೊಸ ನಾಟ್ಯ ಮುದ್ರೆಗಳನ್ನು ಅನ್ವೇಷಿಸಿದ್ದಾರೆ. ನಾಟ್ಯಪಟು ಚಂದ್ರಲೇಖಾರವರು ಬಳಸಿದಂತೆ ಯೋಗಾಸನಗಳನ್ನು ಅರ್ಥಪೂರ್ಣವಾಗಿ ಬಳಸಿಕೊಂಡಿದ್ದಾರೆ. ಇವೆಲ್ಲಕ್ಕಿಂತ ಮಿಗಿಲಾಗಿ ಬಹುರಾಷ್ಟ್ರೀಯ ಸಂಸ್ಕೃತಿಯ ಪ್ರಥಮ ಬಲಿಪಶುಗಳಾದ ಬುಡಕಟ್ಟು ಜನಾಂಗದ ಮಹಿಳೆಯರ ಬದುಕನ್ನು ಅನಾವರಣಗೊಳಿಸಿ ನೋಡುಗರನ್ನು ಚಿಂತನೆಗೆ ಹಚ್ಚಿದ್ದಾರೆ. ತಮಗಿರುವ ಸ್ತ್ರೀಪರಕಾಳಜಿ ಹಾಗು ಪರಿಸರ ಪ್ರಜ್ಞೆಯನ್ನು ಮೆರೆದಿದ್ದಾರೆ. ನಾಟ್ಯ ಕೇವಲ ಮನೋರಂಜನೆ ಹಾಗು ಮನೋವಿಕಾಸಕ್ಕಾಗಿ ಮಾತ್ರವಲ್ಲ, ಸಮುದಾಯದ ಒಳಿತಿಗಾಗಿಯೂ ಶ್ರಮಿಸಬೇಕೆಂಬ ಅನಿವಾರ್ಯವನ್ನು ನರ್ತಕಿ ಗುರುತಿಸಿಕೊಂಡಿದ್ದಾರೆ.

'ಬೇಟೆ' ನೃತ್ಯನಾಟಕದಲ್ಲಿ ಬುಡಕಟ್ಟು ಜನಾಂಗವೊಂದು ನಾಡಿನ ನಾಗರೀಕರೆನಿಸಿಕೊಂಡವರಿಂದ ಮೋಸಕ್ಕೆ ಒಳಗಾದರೆ, ನಾಗರೀಕರೆನಿಸಿಕೊಂಡವರು ಶ್ರಮರಹಿತ ನಾಜೂಕು ಬದುಕಿಗೆ ಮಾರುಹೋಗಿ ತಮ್ಮಂತಹವರೇ ಆದ ಕುತಂತ್ರಿನಾಗರೀಕರಿಂದ ಮೋಸಹೋದ ನಾಟಕವಾಡುತ್ತಾರೆ. ಪ್ರಕೃತಿಯೊಂದಿಗೆ ಸಮರಸದ ಬಾಳುಬದುಕುವ ಜನ ತಮ್ಮೆಲ್ಲ ಶ್ರಮ-ಪ್ರಾಮಾಣಿಕತೆಗಳನ್ನು ಧಾರೆಯರೆದೂ ಸಹ ಬದುಕಿನ ಮೂಲಭೂತ ಅಗತ್ಯಗಳಿಂದ ವಂಚಿತರಾಗಿ ಬದುಕುವ ಹೀನಾಯ ಸ್ಥಿತಿಗೆ ಕಣ್ಮುಚ್ಚುತ್ತಾರೆ. ಬಹುಮುಖೀ ಪ್ರತಿಭೆಯ ಬುದ್ಧಿವಂತರು ವೈಯಕ್ತಿಕಲೋಲುಪ್ತಿಗಾಗಿ ಅಪಾಯಕರ ಬದುಕನ್ನು ಬರಿದುಮಾಡುತ್ತಲೇ ವಿನಾಶನ ಅಂಚಿಗೆ ತಲುಪುತ್ತಾರೆ. ನಾಗರಿಕತೆಯ ಸೋಂಕಿಲ್ಲದ ಬುಡಕಟ್ಟು ಜನ ಒಡೆಯರು ಹೇಳಿದ್ದೆ ಮಾತು, ನೀಡಿದ್ದೆ ಬದುಕು ಎಂದು ನಂಬಿ ಧನ್ಯತಾಭಾವದಿಂದ ಜೀವನ ನಿರ್ವಹಿಸುತ್ತಾರೆ. ಬುಡಕಟ್ಟು ಜನಾಂಗದವರ ಜೀವನಾಡಿಯಾದ ಪ್ರಕೃತಿ ಸಂಪತ್ತನ್ನು ದೋಚಿ ಪರಾರಿಯಾಗುವ ಸುಸಂಸ್ಕೃತ ನಾಗರೀಕರನ್ನು ಬೆರಗುಗಣ್ಣಿನಿಂದ ನಿಟ್ಟಿಸುತ್ತಾರೆ. ಇಂಥ ಶೋಷಿತವರ್ಗದಲ್ಲಿ ಹುಟ್ಟಿ ಬೆಳೆದ ಹೆಣ್ಣೊಂದು ಸಬಲತೆಯಿಂದ ಬದುಕು ಕಟ್ಟಿಕೊಳ್ಳುವ ಯಶಸ್ವಿ ಚಿತ್ರಣವನ್ನು ನೃತ್ಯನಾಟಕ ಸೆರೆಹಿಡಿದುಕೊಡುತ್ತದೆ.

ಕುರುಡಾಗ್ರಾಮದ ಸುರಸುಂದರಿ ಮೇರಿ ಓರಾನ್. ಊಳಿಗಮಾನ್ಯ ಪದ್ಧತಿಯ ಆಕ್ರಮ ಸಂತಾನ. ತಾಯಿ ಬಿಕ್ನಿ ಒಡೆಯನಿಗೆ ಮೈತೆತ್ತುದರ ಫಲ ಈಕೆ. ಅತ್ತ ನಾಗರೀಕ ಸಮಾಜದ ಸೋಂಕಿಲ್ಲದೆ ಇತ್ತ ಬುಡಕಟ್ಟು ಜನಾಂಗದವರೊಂದಿಗೆ ಸೌಮ್ಯವಿಲ್ಲದೆ ಬೆಳೆದವಳು ಮೇರಿ. ಅವಳ ಮೈಮಾಟಕ್ಕಾಗಿ ಹಾತೊರೆಯುವ ದ್ವಿಪಾದಿ ಮೃಗಗಳನ್ನು ದೂರ ಇರಿಸಿದವಳು. ಗಂಡಸರಂತೆ ತನಗೂ ಒಂದು ವ್ಯಕ್ತಿತ್ವವಿದೆ ಎಂಬುದನ್ನು ಗುರುತಿಸಿಕೊಂಡವಳು. ಭೋಗದ ವಸ್ತುವಾಗಿ ನೋಡುವ ಮಂದಿಯನ್ನು ನಿರಾಕರಿಸಿ, ಬದುಕಿನ ಭಾಗವಾಗಲು ಸಿದ್ದನಿದ್ದ ತಾಲಿಮ್‌ನನ್ನು ಸ್ವೀಕರಿಸಿ ದಿಟ್ಟತನ ಮೆರೆದವಳು. ಬಲವಂತಕ್ಕೆಳಸಿದ ಪಟ್ಟಭದ್ರ ಹಿತಾಸಕ್ತಿಯನ್ನು ಸಮಯಸಾಧಿಸಿ ನಿರ್ದಾಕ್ಷಿಣ್ಯವಾಗಿ ನಿರ್ಮೂಲನ ಮಾಡಿ ಪ್ರತೀಕಾರ ತೀರಿಸಿಕೊಂಡ ತೃಪ್ತಿಯಲ್ಲಿ ಹೊಸ ಬದುಕನ್ನು ಕಟ್ಟಿಕೊಳ್ಳುವ ಭರವಸೆಯ ಹೆಜ್ಜೆ ಇಡುವವಳು ಮೇರಿ. ಯಾವುದೇ ಜಾತಿ ಅಥವಾ ಧರ್ಮದ ಹಂಗಿಲ್ಲದೆ, ತಂದೆಯ ಪ್ರೀತಿ ಕಾಣದೆ ತಾಯಿಯ ಆರೈಕೆಯಲ್ಲಿ ಸ್ವತಂತ್ರಳಾಗಿ ಬೆಳೆದ ಮೇರಿ ಮಾನವತೆಯೊಂದಿಗೆ ಬದುಕು ಕಟ್ಟಿಕೊಳ್ಳುವ ನಿಷ್ಠೆಯುಳ್ಳವಳು. ಈ ಎಲ್ಲಾ ವಿಭಾವಾನುಭಾವಗಳನ್ನು ನಾಟ್ಯ ಭಾಷೆಯು ಸಮರ್ಥವಾಗಿ ಸ್ಫುರಿಸಿದೆ. ಪ್ರೇಕ್ಷಕರಲ್ಲಿ ಜಾಗೃತಿಯ ಸೆಲೆ ಚಿಮ್ಮಿಸಿದೆ. ವನದೇವತೆಯ ವಿಷಾಧದಲ್ಲಿ ಪ್ರಕೃತಿಯ ದುಃಸ್ಥಿತಿಯನ್ನು ಪ್ರಚುರ ಪಡಿಸಿದೆ. ಮೇರಿಯ ತಾಯಿ ಬಿಕ್ನಿಯಿ

ಮತಾಂತರ ಪ್ರಕ್ರಿಯೆಯಲ್ಲಿ ಬದುಕು ಮುಖ್ಯ, ಧರ್ಮವಲ್ಲ ಎಂಬ ಕಠೋರ ಸತ್ಯವನ್ನು ಹೊರಚೆಲ್ಲಿದೆ. ಶೋಷಕರಲ್ಲಿ ವಿದೇಶಿಯರು. ಸ್ವದೇಶಿಯರು ಎಂಬ ಭೇದವಿಲ್ಲ ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ. 'ಪ್ರೀತಿ - ಪ್ರೇಮ ನ್ಯಾಯ - ನೀತಿ ಗಳ ಕೊರತೆಯಾದರೆ ಕ್ರಾಂತಿ' ಎಂಬ ಸಂದೇಶವನ್ನು ನೃತ್ಯನಾಟಕದ ಆರಂಭದಿಂದಲೂ ಅಂತ್ಯದವರೆಗೂ ಬಳಸುವ ಕೆಂಪು ವಸ್ತ್ರವೊಂದು ಪ್ರತಿಮಿಸುತ್ತದೆ.

ಬುಡಕಟ್ಟು ಜನಾಂಗ ಮತ್ತು ನಾಗರೀಕ ಸಮಾಜಗಳ ಒಳಹೊರಗುಗಳನ್ನು ಅಭಿನಯ ಸಮರ್ಥವಾಗಿ ಅಭಿವ್ಯಕ್ತಿಸಿದೆ. ಮಹಿಳೆಯೊಬ್ಬಳು ಎಷ್ಟೇ ಸಮರ್ಥಳಿದ್ದರೂ ಹೆಣ್ಣು ಎನ್ನುವ ಕಾರಣಕ್ಕಾಗಿಯೇ ಅನುಭವಿಸುವ ಕಿರುಕುಳವನ್ನು - ಪ್ರತಿ ಫಲವಾಗಿ ಮೂಡುವ ಪ್ರತೀಕಾರ ಮನೋಭಾವವನ್ನು ಮನದಟ್ಟು ಮಾಡಿಕೊಡುತ್ತಾ ಶೋಷಕರಿಗೊಂದು ಎಚ್ಚರಿಕೆಯ ಕರೆಘಂಟೆ ಬಾರಿಸುತ್ತದೆ. ನರ್ತನದ ಕಾಳಜಿ ಯಶಸ್ಸುಗಳಿಸಿದ ತೃಪ್ತಿ ಎಲ್ಲ ಪ್ರೇಕ್ಷಕರಲ್ಲಿ ನಿನದಿಸುತ್ತದೆ.

ಆದರೆ ಸಮಾನತೆಯ ಆಶಯವನ್ನು ಎತ್ತಿ ಹಿಡಿಯುವ ಇಂದಿನ ಎಲ್ಲಾ ವಾದಗಳು, ಪಂಥಗಳು ಮಾನವತೆಯನ್ನು ಗುರಿಯಾಗಿಸಿಕೊಂಡೇ ಕಾರ್ಯ ನಿರ್ವಹಿಸುತ್ತಿವೆ. ಶೋಷಿತರೆಲ್ಲ ಶೋಷಕರ ವಿರುದ್ಧ ಪ್ರತೀಕಾರ ತಳೆದರೆ ಪರಿಸ್ಥಿತಿ ಏನಾದೀತು ? ಎಂಬ ಪ್ರಶ್ನೆ ಎದುರಾದರೆ ಮನಸ್ಸು ಗಲಿಬಿಲಿಗೊಳ್ಳುತ್ತದೆ. ಭಯದಿಂದ ತತ್ತರಿಸುತ್ತದೆ. ಬದುಕು ವಿನಾಶದ ಸುಳಿಯಲ್ಲಿ ಸಿಕ್ಕು ಕೊಚ್ಚಿಹೋಗುತ್ತದೆ. ಆದುದರಿಂದ ಯಾವುದೇ ಹೋರಾಟ ಪ್ರತೀಕಾರದ ನೆಲೆಯದಾದರೆ ಅದು ಪ್ರತಿಗಾಮಿ ಎಂದೇ ಪರಿಗಣಿತವಾಗುತ್ತದೆ. ಪ್ರತಿಗಾಮಿತನವನ್ನು ಹತ್ತಿಕ್ಕಿ ಪ್ರಗತಿಯತ್ತ ಹೆಜ್ಜೆಯಿಡುವುದೇ ಎಲ್ಲಾ ಮಾನವೀಯ ಜೀವಿಗಳ ಮನಸ್ಸಿನ ತುಡಿತ. ಈ ನಿಟ್ಟಿನಲ್ಲಿ ಯೋಚಿಸುವಾಗ ಮೇರಿ ಬರಾನ್ ಅತ್ಯಾಚಾರಕ್ಕೆಳಸಿದ ವ್ಯಕ್ತಿಯ ಕೊಲೆಗೈಯುವುದು ವೈಯಕ್ತಿಕ ನೆಲೆಯಲ್ಲಿ ಸರಿಕಾಣಬಹುದುದಾದರೂ ಸಮೂಹದ ನೆಲೆಯಿಂದ ಅನಪೇಕ್ಷಿತ. ದಿಟ್ಟ ಸ್ವಭಾವದ ಸ್ವತಂತ್ರ ವ್ಯಕ್ತಿತ್ವದ ಸಮರ್ಥ ಮಹಿಳೆ ಮೇರಿ ತನ್ನ ಶಕ್ತಿಯನ್ನು ರಚನಾತ್ಮಕವಾಗಿ ವಿನಿಯೋಗಿಸ ಬೇಕಾದ ಅಗತ್ಯವನ್ನು ಅಪೇಕ್ಷಿಸುತ್ತದೆ. ವೈಯಕ್ತಿಕ ಪ್ರತೀಕಾರಕ್ಕೆ ಬದಲಾಗಿ ಸಾಂಘಿಕ ಪ್ರತಿಭಟನೆ ರೂಪುಗೊಳ್ಳ ಬೇಕಾದ ಅಗತ್ಯವನ್ನು ನಿರೀಕ್ಷಿಸುತ್ತದೆ. ಅತ್ಯಾಚಾರವೆಸಗಿದವರಿಗೆ ಮರಣದಂಡನೆ ನೀಡ ಬೇಕೆ ಬೇಡವೆ ಎನ್ನುವ ಜಿಜ್ಞಾಸೆ ನಡೆಯುತ್ತಿರುವ ಇಂದಿನ ಸಂದರ್ಭದಲ್ಲಿ ಮಾನವತಾವಾದಿಗಳ ಎದುರಿನಲ್ಲೊಂದು ಪ್ರಶ್ನೆ ಎದ್ದಿದೆ. ಅದೇ ನಮಗಿಂದು ಬೇಕಿರುವುದು ಪ್ರತೀಕಾರವೋ ? ಪ್ರತಿಭಟನೆಯೋ ? ವೈಯಕ್ತಿಕ ಹಿತಾಸಕ್ತಿಯೋ ? ಸಮೂಹದ ಹಿತಾಸಕ್ತಿಯೋ ? ಎಂಬುದು. ನೃತ್ಯ ನಾಟಕ ವಾಸ್ತವವನ್ನು ನಮ್ಮ ಮುಂದೆ ತೆರೆದಿಟ್ಟಿದೆ. ಅಂತಿಮ ತೀರ್ಪು ಅವರವರ ದರುಶನಕ್ಕೆ.

ಭರತನಾಟ್ಯದ ಸಾಂಪ್ರದಾಯಿಕ ಉಡುಗೆತೊಡುಗೆಗಳಿಂದ ವಿಮುಕ್ತಿ ಪಡೆದು ಸರಳವಾಗಿಯೇ ವಿಜೃಂಭಿಸಿದ ಈ ನೃತ್ಯನಾಟಕ ಯಶಸ್ವಿ ಪ್ರದರ್ಶನ ಎಂದೇ ಹೇಳಬೇಕು ಇಂತಹ ಪ್ರದರ್ಶನವೊಂದನ್ನು ರಂಗಾಯಣ ಭೂಮಿ ಗೀತದಲ್ಲಿ ಆಯೋಜಿಸಿದವರು ಮೈಸೂರಿನ ರಂಗಾಯಣ, ನವರಸ ಆರ್ಟ್ಸ್ ಅಕಾಡೆಮಿ ಹಾಗು ಡಾನ್ಸ್ ಥಿಯೇಟರ್. ಬಾಸ್ಟನ್ ಯು ಎಸ್ ಎ. ನಿರ್ದೇಶನ ಮತ್ತು ಪ್ರಸ್ತುತ - ಅಪರ್ಣಾ ಸಿಂಧೂರ್ ರಂಗ ರೂಪ ರಚನೆ - ರಾಜು ಮಿಾನಸಿವ ಸಂಕರನ್, ಕನ್ನಡಕ್ಕೆ - ಎಚ್.ಎಸ್. ಸತೀಶ್. ಧ್ವನಿ - ಡಾ. ಶ್ರೀವಳ್ಳಿ, ನಿರೂಪಣೆ - ಶೀಲ ದ್ವೀಮಿ.

**ಬಿ.ಸಿ. ಮಂಜುಳ. ಮೈಸೂರು**

---

# ಯುದ್ಧ

ಹೂಡಬೇಕಿಲ್ಲ ಯುದ್ಧ
ಗಡಿಗಳಲ್ಲಿ ;
ಗಡಿಗಳಿರುತ್ತವೆ
ಯುದ್ಧವಿರುವಲ್ಲಿ.

-(ಸ್ನೇಹಮಯಿ ಚೌಧರಿ)

**ಕನ್ನಡಕ್ಕೆ**
**ವೆಂ.ವನಜ**

# ನಾನ್ಯಾರು ?

ನೀವು ಗೊತ್ತಿರಲಿಲ್ಲ
ಸಂಪ್ರದಾಯದ ನಿಮಗಂದು
ಹೊರೆಯಡಿ ಬೆದರದು
ಬಚ್ಚಿಟ್ಟವಳೇ ಬೆಳಕು
ನಾನು ಕತ್ತಲೆಗೆಂದೊ

**- ಕೇಶ್ವರ್ ನಹೀದ್**

# ಸಮರಕ್ಕೆ ಸಿದ್ಧ ನಾವು

ಡಾ. ಶೈಲಜಾ ಉಡಚಣ

ಸಮಶಕ್ತಿ ಸಮಾನವಿಕಾಸ
ಸಮ ಸಮ ಹೆಜ್ಜೆ ಸಾವಿರ
ದಿಕ್ಕಿನಲ್ಲಿ ಸಾಗಲಿ ಸಂಸಾರ
ಸ್ವಾರಸ್ಯದಲ್ಲಿ ಸ್ವರ್ಗಸುಖವರಳಲಿ

ಕಲೆಯ ಕುತಂತ್ರದಲಿ
ಕಾಮ ಪಿಪಾಸೆ ತಣಿಸುತ್ತಾ
ಪ್ರೇಮ ವ್ಯಾಖ್ಯಾನದಲ್ಲಿ
ಕಪಟನಾಟಕವಾಡುತ್ತಾ

ಸಾಗಿದ ಈ ಇಮುಖ ನೀತಿಗೆ ಎಂದು ಕೊನೆ
ನೇರ ನಡೆಯೋಣ ಎಂದೇ ಸಾರೋಣ ಬನ್ನಿ ಗೆಳತಿಯರೇ
ಸಾಮರಸ್ಯದ ಸಮರಶಕ್ತಿಯಿಂದ
ಕಹಳೆ ನಿನಾದ ಮೊಳಗಿಸೋಣ
ಶೋಷಣೆಯ ಸಾವಿರ ಮುಖಗಳು
ತಂತ್ರೋಪಾಯ ಪುರಾಣ ಪುಟಗಳು
ಮೈ ಮನ ಒಂದೇ ಮಾತು ಅನುಭವ
ಸಂವೇದನೆಗಳು ಯಾವು ಇಲ್ಲ ನೇರ
ಪರಸ್ಪರ ಸ್ಪಂದಿಸಿದ ಪರಿಹಾರ ಕಾಣದ ಎದೆ ಭಾರ

ಈ ಭದ್ರಕೋಟೆಯ ಗೋಡೆಗಳಿಗೀಗ
ಬಂದಿವೆ ಬರುತ್ತಲಿವೆ ಬಿರುಕು
ಹಚ್ಚೋಣ ಬನ್ನಿ ಶತಮಾನಗಳ ವ್ಯಥೆಯ ಪುಟಗಳಿಗೆ
ಪುರಾಣ ಕಂತೆ ಪವಾಡಗಳಿಗೆ ಬೆಂಕಿ ಕಿಚ್ಚು
ಸಹಜ ನಿಸರ್ಗದ ನಡೆಯ ಹೊಡೆ ಮಿಂಚು

ನಮ್ಮ ಮಾನಸ ಲೋಕವೀಗ
ವಿಶ್ವವ್ಯಾಪಿ ಮೈ ಮುರಿದ್ದೆದ್ದು
ಸಿದ್ಧವಾಗಿದೆ ನವ ನಿರ್ಮಾಣಕ್ಕಾಗಿ
ಹೆಣ್ಣು ನೀ ದಾಸಿ ನಾ ದೇವ
ಸೇವೆಗಾಗಿ ನಿನ್ನ ಸಹಜ ಸೃಷ್ಟಿ
ನಾನಾಳುವ ಒಡೆಯ
ನನ್ನಂಕಿತದಲ್ಲಿಯೇ ಪಡೆಯಬೇಕು ಧನ್ಯತೆಯ

ದಲಿತ ಬಲಿತ ಶೋಷಕ ಶೋಷಿತ
ಎಲ್ಲರೊಳು ಅವಿತ ಅಹಮಿಕೆಯ
ಗರ್ಭಗುಡಿಯ ಗಂಡು ಗಾಡಿಯ
ಪೂಜ್ಯಗೊಂಡು ಕಲ್ಲಾದವಳು
ಸಂಸ್ಕೃತಿ ಸಂರಕ್ಷಣೆಯ ವಂಶ ಕೀರ್ತಿ
ವ್ಯಕ್ತಿ ಪ್ರತಿಷ್ಠೆಯ ಚರಿತ್ರಾ ಪುಟಗಳಲ್ಲಿ ಘಟಿಸುವ ವಾರ್ತೆಯ
ಕಾಪಿಡುವ ಮೂಕ ದೇವತೆಯಾದವಳು

ಸುಂದರಿ ಸುಖ ಸಂತಸದ ಮಂದಿರ
ಗಂಡು ಗಾಡಿಯ ಠೀವಿ ಠೇಂಕಾರಕ್ಕೆ
ಕುಣಿಸಿದಂತೆ ಕುಣಿಯುತ್ತ
ನಾನಲ್ಲಿ ನೀನೇ ಜಗದ ಚರಿತ್ರೆಯಲ್ಲಿ
ಎಲ್ಲಾ ಎಂದು ಮರೆಯಾದವಳು

ಈ ಭೇದ ನೀತಿಗಿಲ್ಲ ಇನ್ನೂ
ತುಂಬ ಬಲ್ಲ ಹೃದಯಸಿರಿ
ಮನ ಮಿದುಳುಗಳ ಸ್ವಾರ್ಥ ಕೈಯಲ್ಲಿಟ್ಟು
ಅಧಿಕಾರ ಅಹಂ ಅನುಗಾಲ ಹರಿಸುವ ಪರಿ

ಮರೆತು ನಡೆಯೋಣ ನಾವಿನ್ನೂ
ಮರ್ತ್ಯವಾಗಲಿ
ಈ ಹೊಲ ನನ್ನ ನಿನ್ನ ದೈವ ಸಾಕ್ಷಾತ್ಕಾರದ ಫಲ
ಬಾ ಗೆಳೆಯ ನಾನಿನ್ನ ಸಖಿ
ನೀ ನನ್ನ ಸಮ ಬಲ ಸಂಗಾತಿ ಸಖ

ಅರ್ಧಾಂಗರು ನಾವೆಲ್ಲ ಪೂರ್ಣಾಂಗರಾಗಿ
ಪಡೆದು ಜಗದಗಲ ಮುಗಿಲದಗಲ
ಹರಿಯುವ ಅಪ್ಪುವ ಆತ್ಮವಿದ್ದವರು
ವಿದ್ಯೆ ವಿನ್ಯಾಸದೊಳು ಲೋಕಶಿಕ್ಷಣದೊಳು
ನಿನ್ನೊಳಗೆ ನಾನು ನನ್ನೊಳಗೆ ನೀನು
ವಿಕಾಸದ ಹಾದಿ ಸಾಗಿತು ಸಹಜ ನಿಸರ್ಗದ ಪಥದೊಳು ತಾನು

# ಅನಿವಾಸಿ ಭಾರತೀಯರ ಮೋಸದ ಮದುವೆಗಳು

ಪಂಜಾಬ್ ಆರಕ್ಷಕ ದಳದಲ್ಲಿ ಆನಿವಾಸಿ ಭಾರತೀಯರ (NRI) ವಿಶೇಷ ಘಟಕ ಪ್ರಾರಂಭವಾಗಿದೆ. ಈ ಘಟಕಕ್ಕೆ ಅನಿಭಾರತೀಯ ಪುರುಷರನ್ನು ಮದುವೆ ಆಗಿ ಅವರಿಂದ ಮೋಸಕ್ಕೆ ಒಳಪಟ್ಟ ಅನೇಕ ಮಹಿಳೆಯರ ದುರಂತಗಳ ದೂರಿನ ಮಹಾಪೂರವೇ ಹರಿದಿದೆ. ಪಂಜಾಬ್ ರಾಜ್ಯದಲ್ಲಿ ಇಂತಹ ಮೋಸಕ್ಕೆ ಸಿಕ್ಕಿ ಹಾಕಿಕೊಂಡ ಮಹಿಳೆಯರ ಸಂಖ್ಯೆ ಗಮನೀಯವಾಗಿ ಎರಿದೆ.

ಹೊರದೇಶದಿಂದ ಬಂದು ಸ್ಥಳೀಯ ಪಂಜಾಬ್ ಹೆಣ್ಣುಮಕ್ಕಳನ್ನು ಮದುವೆ ಆಗಿ ಅವಸರವಾಗಿ ಮಧುಚಂದ್ರ ಮುಗಿಸಿಕೊಂಡು ಹೆಂಡತಿಯನ್ನು ನಂತರ ತನ್ನ ಹೊರದೇಶದ ವಾಸ ಸ್ಥಾನಕ್ಕೆ ಕರೆಸಿಕೊಳ್ಳುವೆನೆಂದು ಹೇಳಿ ಹಾಗೇ ಪರಾರಿ ಆಗುತ್ತಿದ್ದಾರೆ. ಅವರು ಕರೆಸಿಕೊಳ್ಳುವುನೆಂದು ನೀಡಿದ ಭರವಸೆಗಳು ಪೊಳ್ಳು ಎಂದು ಅವರಿಗೆ ಅರವಾಗುವುದು ಮದುವೆ ಮಾಡಿಕೊಂಡಾತ ಹೊರದೇಶದ ನ್ಯಾಯಾಲಯದಿಂದ ವಿಚ್ಛೇದನದ ಡಿಕ್ರಿ (ತೀರ್ಪು) ಕೈಗೆ ತೆಗೆದುಕೊಂಡಾಗ ಮಾತ್ರ.

ಇಂತಹ ಪ್ರಕರಣಗಳನ್ನು ಎದುರಿಸಿ ಪರಿಹಾರ ಸೂಚಿಸಲು ಪ್ರಸ್ತುತ ಇರುವ ಕಾನೂನುಗಳು ಸಮರ್ಪಕವಾಗಿಲ್ಲ. ಇಂತಹ ಸಂದರ್ಭಗಳಲ್ಲಿ ಕಡೇ ಪಕ್ಷ ವಿವಾಹ ವಿಚ್ಛೇದನ ಪಡೆಯಲು ಸಹ ಹರಸಹಾಸ ಪಡಬೇಕಾಗುತ್ತದೆ. ನಮ್ಮ ದೇಶದ ನ್ಯಾಯಾಲಯಗಳು "ಪರಾರಿ"ಯು ವಿಶಯದಲ್ಲಿ ಕನಿಷ್ಟ 7 ವರುಷಗಳು ಕಳೆದಿರಬೇಕು ತದನಂತರ ಕಾನೂನು ಚೌಕಟ್ಟಿನೊಳಗೆ ಸೂಕ್ತ ಪರಿಹಾರ ಪಡೆಯಬಹುದು ಎನ್ನುತ್ತದೆ. ಕಾನೂನುಗಳು ಹೀಗಿರುವಾಗ ಇಂತಹ ಮೋಸದ ಮದುವೆಗೆ ಒಳಪಟ್ಟ ಮಹಿಳೆಯರಿಗೆ ಕಾನೂನುಗಳಡಿಯಲ್ಲಿ ಯಾವುದೇ ಸೂಕ್ತ ಪರಿಹಾರ ಪಡೆಯ ಬಹುದು ಎನ್ನುತ್ತದೆ. ಕಾನೂನುಗಳು ಹೀಗಿರುವಾಗ ಇಂತಹ ಮೋಸದ ಮದುವೆಗೆ ಒಳಪಟ್ಟ ಮಹಿಳೆಯರಿಗೆ, ಕಾನೂನುಗಳಡಿಯಲ್ಲಿ ಯಾವುದೇ ಸೂಕ್ತ ಪರಿಹಾರ ದೊರಕುವುದಿಲ್ಲ. ಮಹಿಳೆಯರನ್ನು ಶೋಷಿಸುವ ಇಂತಹ ನೂತನ ಮಾರ್ಗೋಪಾಯಗಳು ಹುಟ್ಟಿ ಕೊಂಡಷ್ಟು ಸುಲಭವಾಗಿ ಕಾನೂನುಗಳು ಸೂಕ್ತ ರೀತಿಯು ಹೊಸ ರೂಪ ಪಡೆದು ಮಾರ್ಪಾಡು ಹೊಂದಿಲ್ಲ. ಮಹಿಳೆಗೆ ಇಂತಹ ಸಂದರ್ಭದಲ್ಲಿ ಕಾನೂನು ಪರಿಧಿಯ ಒಳಗೆ ರಕ್ಷಣೆ ಪಡೆದು ಕಾನೂನು ರೀತ್ಯಾ ಕ್ರಮಕೈಗೊಳ್ಳಲು ಕಾನೂನುಗಳು ಸಮರ್ಪವಾಗಿರಬೇಕು.

ಇದರಿಂದ ಇಂತಹ ಮೋಸದ ಮದುವೆಗೆ ಒಳಪಟ್ಟಿರುವ ಅನೇಕ ಮಹಿಳೆಯರು ಅನಿವಾಸಿ ಕುಟುಂಬದವರ ಹಿಂಸೆಗೆ ಬಲಿಯಾಗುತ್ತಿದ್ದಾರೆ. ಇಮಿಗ್ರೇಷನ್ ಸಂಖ್ಯೆ ಹೆಚ್ಚಾಗಿರುವ ರಾಜ್ಯಗಳಲ್ಲಿ (ಕೇರಳಾ, ಪಂಜಾಬ್) ಇಂತಹ ಪ್ರಕರಣಗಳು ಅಧಿಕ ಸಂಖ್ಯೆಯಲ್ಲಿ ಬಯಲಿಗೆ ಬಂದಿವೆ. ಇಂತಹ ಪ್ರಕರಣಗಳನ್ನು ಉದ್ದೇಶಿಸಿ, ನಿಯಂತ್ರಿಸಿ ಸೂಕ್ತ ಕ್ರಮ ಕೈಗೊಳ್ಳಲು ಪಂಜಾಬ್ ಆರಕ್ಷಕ ದಳದ ಅಡಿಯಲ್ಲಿ ಅನಿವಾಸ ಭಾರತೀಯರ ವಿಶೇಷ ಘಟಕ ಪ್ರಾರಂಭವಾಗಿದೆ.

ಇಂತಹ ಮೋಸದ ಮದುವೆಗಳ ಪ್ರಕರಣಗಳನ್ನು ದಾಖಲಿಸಿಕೊಂಡು, ಎದುರಿಸಿ, ಸಮರ್ಪಕ ಪರಿಹಾರ ಸೂಚಿಸುವ ಉದ್ದೇಶ ಹೊಂದಿದೆ. ವಿಶೇಷ ಘಟಕವು ಇಂತಹ ದೂರುಗಳನ್ನು 'ಅತ್ಯಾಚಾರ' ಕಾನೂನುಗಳಡಿಯಲ್ಲಿ ದಾಖಲಿಸಿಕೊಳ್ಳುತ್ತಿವೆ. ಸಂಭೋಗ ಕ್ರಿಯೆ ಹೊಂದುವ ದುರುದ್ದೇಶದಿಂದ ಮೋಸದ ಮದುವೆ ಮಾಡಿಕೊಳ್ಳಲಾಗಿದೆ ಎಂಬ ತರ್ಕದ ಆಧಾರದ ಮೇಲೆ ಅತ್ಯಾಚಾರದ ಕಾನೂನುಗಳಡಿಯಲ್ಲಿ ಪ್ರಕರಣಗಳು ದಾಖಲುಗೊಳ್ಳುತ್ತಿವೆ.

ಇದೇ ರೀತಿಯು ಮೋಸದ ಮದುವೆ ಪ್ರಕರಣದಲ್ಲಿ ಸಿಕ್ಕಿ ಹಾಕಿಕೊಂಡ ನೀರಜಾ ಸರೀಫ್ ಎಂಬರು ಸರ್ವೋಚ್ಚ ನ್ಯಾಯಾಲಯದಲ್ಲಿ ಹೂಡಿದ್ದ ಮೊಕದ್ದಮೆಗೆ ಸರ್ವೋಚ್ಚ ನ್ಯಾಯಾಲಯವು ಮಹತ್ವತದ ತೀರ್ಪು ನೀಡಿದೆ. (1994) (6 SCC 461)

ಉದ್ಯೋಗಸ್ಥೆ ಆಗಿದ್ದ ನೀರಜಾ ಸರಾಫ್‌ರವರು ಅನಿವಾಸಿ ಭಾರತೀಯ ಗಂಡನ ಆಣತಿಯ ಮೇರೆಗೆ ಉದ್ಯೋಗ ತೊರೆದು ಗಂಡನು ಹೊರದೇಶದ ತನ್ನ ವಾಸಸ್ಥಾನಕ್ಕೆ ಕರೆಸಿಕೊಳ್ಳುವನೆಂದು ಜಾತಕ ಪಕ್ಷಿಯಂತೆ ಕಾಯುತ್ತಿದ್ದಳು ಆದರೆ ಆಕೆಗೆ ಸಿಕ್ಕಿದ್ದು ಹೊರದೇಶಕ್ಕೆ ಹೊರಡಲು ವೀಸಾ ಅಲ್ಲ ಅದರ ಬದಲಿಗೆ ಅಮೇರಿಕಾದ ನ್ಯಾಯಾಲಯ ಬಂದರಿಂದ ವಿವಾಹ ವಿಚ್ಛೇದದ ತೀರ್ಪು. ಇಂತಹ ಸಂದರ್ಭದಲ್ಲಿ ಆಕೆಗೆ ಭಾರತೀಯ ನ್ಯಾಯಾಲಯದ ಮೊರೆ ಹೊಕ್ಕು ವಿಚ್ಛೇದನ ಪಡೆದು ಪರಿಹಾರ ನಿಧಿ ಪಡೆಯುವ ಏಕೈಕ ಮಾರ್ಗ ಗೋಚರಿಸಿತು. ಸರ್ವೋಚ್ಚ ನ್ಯಾಯಾಲಯ ಆಕೆಗೆ 22 ಲಕ್ಷ ಪರಿಹಾರ ನಿಧಿ ನೀಡಲು ಆಕೆಯ ಮಾಜಿಗಂಡನಿಗೆ ಆದೇಶ ನೀಡಿತು. ಇದರ ಜೊತೆಗೆ ಆತ ಭಾರತದಲ್ಲಿ ಮತ್ತು ಹೊರದೇಶದ ತನ್ನ ವಾಸಸ್ಥಾನದಲ್ಲಿ ಹೊಂದಿದ ಬಹುದಾದಂತಹ ಸ್ಥಿರ ಆಸ್ತಿಯಲ್ಲಿ ಭಾಗ ಪಡೆಯುವ ಹಕ್ಕು ನೀಡಿತು.

ಇದೇ ಮಹತ್ವದ ತೀರ್ಪಿನಲ್ಲಿ ಸರ್ವೋಚ್ಚ ನ್ಯಾಯಾಲಯವು ಕೌಟುಂಬಿಕ ಕಾನೂನುಗಳಲ್ಲಿ ಸಮರ್ಪಕವಾದ ಬದಲಾವಣೆ ಮಾಡಿಕೊಳ್ಳುವ ಸಾಧ್ಯತೆಗಳ ಬಗ್ಗೆ ಪರಿಶೀಲಿಸಬೇಕು. ವಿಶೇಷವಾಗಿ ಭಾರತೀಯ ನ್ಯಾಯಾಲಯವು ವಿವಾಹ ವಿಚ್ಛೇದನ ಹೊರದೇಶದ ನ್ಯಾಯಾಲಯಗಳು ಮಾನ್ಯತೆ ನೀಡಿ ಪರಿಪಾಲಿಸಲು ಸಾಧ್ಯವಾಗುವಂತಹ ರೀತಿಯಲ್ಲಿ ಕೌಟುಂಬಿಕ ಕಾನೂನುಗಳು ಮಾರ್ಪಾಡು ಮಾಡಿಕೊಂಡು ನೂತನ ಮಾರ್ಗದರ್ಶಿಗಳನ್ನು ಅಳವಡಿಸಿಕೊಳ್ಳಬೇಕು ಎಂದು ಸಲಹೆ ನೀಡಿತು. ಇದಲ್ಲದೆ ಭಾರತದಲ್ಲಿ ನಡೆದ ಮದುವೆಯನ್ನು ನಿಷ್ಕ್ರಿಯಗೊಳಿಸುವ ಅಧಿಕಾರ ಹೊರ ದೇಶದ ನ್ಯಾಯಾಲಯಗಳ ಹೊಂದಿರಬಾರದು ಎಂದು ತೀರ್ಪ ನೀಡಿತು.

ಇಂತಹುದೇ ಮತ್ತೊಂದು ಪ್ರಕರಣದಲ್ಲಿ ಸೂರ್ಯನಾರಾಯಣ ಎಂಬವರು ನ್ಯಾಯಾಲಯದ ಆದೇಶದಂತೆ ಇಂದಿರಾ ಸೋನಿಯವರಿಗೆ ಪರಿಹಾರ ಮೊತ್ತ ನೀಡದಿದ್ದ ಕಾರಣಕ್ಕಾಗಿ ದೆಹಲಿಯ ಉಚ್ಚ ನ್ಯಾಯಾಲಯವು ಇಂಟ್‌ಪೋಲ್ (Interpol) ಮೂಲಕ ಜಾಮೀನು ರಹಿತ ದಸ್ತಗಿರಿಯ ಆದೇಶ ನೀಡಿದೆ.

ಇಂತಹ ಮೋಸದ ಮದುವೆಯ ಜಾಲಕ್ಕೆ ಬಲಿಯಾಗುತ್ತಿರುವ ಅನೇಕ ಹೆಣ್ಣು ಮಕ್ಕಳ ಪೈಕಿ ಕೆಲವರಿಗಾದರೂ ನ್ಯಾಯಾಲಯದ ಚೌಕಟ್ಟಿನಲ್ಲಿ ಕನಿಷ್ಟ ಪಕ್ಷ ಪರಿಹಾರ ದೊರಕಿರುವುದು. ಆಶಾದಾಯಕವಾಗಿದೆ.

ಕನ್ನಡಕ್ಕೆ ಸವಿತಾ
ಕೃಪೆ. ತೆಹಲ್ಕಾ

# ಅಜ್ಜಿ ಕೌದಿ

ಗದಗುಟ್ಟುವ ಚಳಿಗೆ
ಅಜ್ಜಿಯ ಮಗ್ಗುಲ ಹಿತ
ಕೌದಿಯ ಬೆಚ್ಚಗಿನ ಸುಖ
ಬಿಸಿಲ ಬೇಗೆಯ ಶಾಖ
ಅಜ್ಜಿಗೆ ಕೌದಿ ಹೊದಿಕೆ
ಈಗದು ಬರಿ ನೆನಪು

ನಾಗಂದಿಗೆ ಪೆಟ್ಟಿಗೆಯೊಳಗೆ
ಅಜ್ಜಿ ಕೌದಿಗೆ ಆಶ್ರಯ
ಹರಯದ ಹುಮ್ಮಸ್ಸಿಗೆ
ಬಿಡಿಸಿ ನೋಡುವ ಹಂಬಲ
ಅಮ್ಮನ ನಿರಾಕರಣೆ
ಹೆತ್ತಮ್ಮನ ನೆನಪಿನ ಬುತ್ತಿ
ಬಿಚ್ಚಿಡದೆ ಬಚ್ಚಿಟ್ಟ ನೆಮ್ಮದಿ.

ಅಮ್ಮನ ಎತ್ತರವೇರಿದ ಖುಶಿ
ದಶಕದ ಕುತೂಹಲ ತಣಿಸುವ ತವಕ
ನಾಗಂದಿಗೆ ಪೆಟ್ಟಿಗೆಗೆ ನೆಲದ ಸ್ಪರ್ಶ

ಗಾಳಿ ಬೆಳಕಿಲ್ಲದೆ ಮುಗ್ಗಲು ವಾಸನೆ
ಧೂಳ ಕೊಡವಿ ಮಡಿಕೆ ತೆರೆದರೆ
ನಿಟ್ಟುಸಿರು ನರಳುವಿಕೆ
ತೇಪೆ ಹಚ್ಚಿದ ಮೂಲೆ
ಸುಟ್ಟಬಟ್ಟೆಯ ಗುರುತು.

ಇನ್ನೊಂದು ಮಡಿಕೆ
ಇಳಕಲ್ ಮೊಳಕಾಲ್ಮೂರು
ಹುಬ್ಬಳ್ಳಿ ಛತ್ತೀಸ್‌ಗಡ
ಗದ್ವಾಲ ಸೀರೆಗಳ ಮೇಳ
ಸೆರಗು ಅಂಚು ಒಡಲುಗಳ
ರಂಗು ರಂಗಿನ ಲೋಕ
ಬಣ್ಣ ಬಣ್ಣದ ಕನಸು
ರಂಗೋಲಿ ಚಿತ್ತಾರ.

ಒಳಪದರ ಬಿಡಿಸುವ ಕುತೂಹಲ
ಅಂಚಿಗೆಲ್ಲ ಹೊಲಿಗೆಯ ದಾರ
ಅಜ್ಜಿ ಕೈಚಳಕದ ಮೋಡಿ

ಒಂದೊಂದಾಗಿ ದಾರ ತೆಗೆಯುವ
ಅಮ್ಮನ ಬೆರಳ ಮಿಡಿತ
ಒಳಗೆ ಸಪ್ತವರ್ಣದ ಕುಸುರಿ
ಕೊಕ್ಕು ಬಳುಕಿಪ ಗಿಳಿ
ಹೆಜ್ಜೆ ಹಾಕುವ ನವಿಲು
ಕೋಗಿಲೆಯ ಕುಕಿಲು
ಹಕ್ಕಿಗಳ ಚಿಲಿಪಿಲಿ
ರೆಕ್ಕೆ ಬಿಚ್ಚಿದ ಪಾರಿವಾಳ
ಬಣ್ಣ ಮಾಸಿದ ದಾರ
ಜೀವ ಪಡೆದಿಹ ಚಿತ್ರ.

ಅಮ್ಮನ ಮುಖದಲ್ಲಿ
ನಿರೀಕ್ಷೆ ಮೀರಿದ ಬೆರಗು
ನನ್ನ ಕುತೂಹಲದ ಹಕ್ಕಿಗೆ
ರೆಕ್ಕೆಪುಕ್ಕಗಳ ಜಗಿತ
ನಾಗಂದಿಗೆ ಪೆಟ್ಟಿಗೆ ಕೌದಿಗೆ
ಬೆಳಕಿನ ದರ್ಶನ.

- ಡಾ.ಚಂದ್ರಮತಿ ಸೋಂದಾ




ಕಳೆದ 20 ವರ್ಷಗಳಿಂದ ಮಾನಸ ತಿಂಗಳ ಪತ್ರಿಕೆ ನಿಮ್ಮ ಕೈ ಸೇರುತ್ತಿದೆ. ಇತ್ತೀಚಿನ ವರ್ಷಗಳಲ್ಲಿ ಮಾನಸ ಬಳಗ ಎದುರಿಸಿದ ಎಡರು ತೊಡರುಗಳನ್ನು ದಾಟಿಯೂ ಕೂಡ ಮಾನಸ ಪತ್ರಿಕೆಯನ್ನು ನಿರಂತರವಾಗಿ ಪ್ರಕಟಿಸಲು ನಾವು ಪ್ರಯತ್ನಿಸುತ್ತಿದ್ದೇವೆ. ಮಾನಸ ಪತ್ರಿಕೆ ಬೆಳೆಸುವಲ್ಲಿ ತಾವು ಈ ಕೆಳಗಿನ ಸಹಾಯ ಸಹಕಾರ ನೀಡಬೇಕಾಗಿ ಕಳಕಳಿಯ ವಿನಂತಿ.

- ನಿಮ್ಮ ಚಂದಾ ನವೀಕರಿಸಿ.
- ಪತ್ರಿಕೆಗೆ ಲೇಖನ, ಕವನ, ಪುಸ್ತಕ ವಿಮರ್ಷೆ ಬರೆದು ಕಳಿಸಿ.
- ಮಹಿಳೆಯರ ಮೇಲೆ ನಡೆಯುವ ಹಿಂಸೆಗಳನ್ನು ಕುರಿತು ಸುದೀರ್ಘವಾಗಿ ವರದಿ ಮಾಡಿ .
- ನಿಮಗೆ ಮಾನಸ ಪತ್ರಿಕೆ ತಲುಪದಿದ್ದರೆ ನಿಮ್ಮ ಸರಿಯಾದ ವಿಳಾಸವನ್ನು ತಕ್ಷಣವೇ ಬರೆಯಿರಿ.

ಮಾನಸ ನಿಮ್ಮ ಪತ್ರಿಕೆ ಉಳಿಸಲು ಬೆಳೆಸಲು ನಿಮ್ಮ ಸಹಕಾರ ಅಗತ್ಯ,




ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

**ಸಂ.ಮಂಡಳಿ**

REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :

**ಮಾನಸ**

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067